ಬಣ್ಣದ ಚಿಟ್ಟೆ, ಹೊನ್ನಿನ ಚಿಟ್ಟೆ, ಬಾರೇ ನೋಡೇ!
ನನ್ನೀ ತೋಟ, ನನ್ನೀ ಪುಷ್ಪ ಎಲ್ಲಾ ನೋಡೇ!
ಬಣ್ಣದ ಚಿಟ್ಟೆ ನೋಡೇ ಇಲ್ಲಿ, ಜೆಮ್ಸ್ ಇವೆ ಬಹಳಷ್ಟು!
ನಿನಗೂ, ನನಗೂ, ಗೆಳೆಯರಿಗೂ ಸಹ ಬೇಕಾದಷ್ಟು!








**ಜೆಮ್ಸ್ ಸವಿಯುವಾಗ**
**ಪ್ರತಿ ನಿಮಿಷವೂ ರಸನಿಮಿಷ!**

ಕ್ಯಾಡ್‌ಬರಿಸ್
ಚಾಕ್‌ಲೇಟ್‌ಗಳು

ಕ್ಯಾಡ್‌ಬರಿಸ್ ಜೆಮ್ಸ್ ಮಣಿಮಾಲೆ, ಬಹು ವಿಧ ಸಂತಸದ ಲೀಲೆ!

OBM/6642/KN

# ಚಂದಮಾಮ ಕ್ಯಾಮಲ್
## ಬಣ್ಣ ಹಾಕುವ ಸ್ಪರ್ಧೆ
ಪ್ರವೇಶಧನವಿಲ್ಲ




**ಬಹುಮಾನ ಗಳಿಸಿರಿ.**

ಕ್ಯಾಮಲ್ — ಪ್ರಥಮ ಬಹುಮಾನ ರೂ. 15
ಕ್ಯಾಮಲ್ — ದ್ವಿತೀಯ ಬಹುಮಾನ ರೂ. 10
ಕ್ಯಾಮಲ್ — ತೃತೀಯ ಬಹುಮಾನ ರೂ. 5
ಕ್ಯಾಮಲ್ — 5 ಪ್ರೋತ್ಸಾಹಕ ಬಹುಮಾನಗಳು
ಕ್ಯಾಮಲ್ — 10 ಸರ್ಟಿಫಿಕೇಟ್‌ಗಳು



ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ
P.B. No. 9928, COLABA, Bombay-400 005.

ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

Name............................................ Age ..............................

Address.......................................................................................

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

ದಯವಿಟ್ಟು ಚಿತ್ರವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.

ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು: 30-11-1981

VISION

**CONTEST NO.22**

ಚುಕ್ಕೆ ಗೆರೆಯ ಉದ್ದಕ್ಕೂ ಕತ್ತರಿಸಿರಿ.

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

**ಮಾ**ನವರೊಳಗೆ ಪ್ರತಿಭಾಶಾಲಿಗಳೂ, ಬುದ್ಧಿಮತ್ತತೆಯುಳ್ಳವರೂ ಎಲ್ಲೆಲ್ಲೋ ಹೇಗೆ ಹೇಗೋ ಇರುತ್ತಾರೆ. ಎಲ್ಲರೂ ಬಹಿರಂಗಕ್ಕೆ ಬರುವುದಿಲ್ಲ. ಕಷ್ಟ ಕೋಟಲೆಗಳೆಷ್ಟೋ ಅವರನ್ನು ಮುಚ್ಚಿಕೊಂಡಿರುತ್ತವೆ. ಕೆಲವರು ಸಾಹಸಪಟ್ಟು ಸ್ವತಃ ಮುಂದೆ ಬರಬೇಕೆಂದರೂ ಅವರ ಸ್ಥಿತಿಗಳು ಅವರನ್ನು ತಡೆಯುತ್ತವೆ. ಬಹಿರಂಗದಲ್ಲಿ ಮೆರೆಯುವವರು ಅವರಿಗೆ ಬಿಟ್ಟುಕೊಡುವುದೂ ಇಲ್ಲ. ಈ ಸಂಚಿಕೆಯಲ್ಲಿರುವ "ಚಮತ್ಕಾರಕ್ಕೆ ಸತ್ಕಾರ" ಎಂಬ ಸಣ್ಣ ಕಥೆಯಿಂದ ಮೇಲಿನ ಸಂಗತಿಗಳು ನೆನಪಿಗೆ ಬರುತ್ತವೆ.

## ಅಮರವಾಣಿ

**ವಿಕೃತಿಂ ನೈವ ಗಚ್ಛಂತಿ ಸಂಗದೋಷೇಣ ಸಾಧವಃ**
**ಆವೇಷ್ಟಿತಂ ಮಹಾಸರ್ಪೈಃ ಚಂದನಂ ನ ವಿಷಾಯತೇ**

ಉತ್ತಮರಿಗೆ ದುಷ್ಟ ಸಾಂಗತ್ಯದಿಂದ ಕೆಟ್ಟ ಗುಣಗಳು ಬರಲಾರವು. ಚಂದನ ವೃಕ್ಷವನ್ನು ವಿಷಸರ್ಪಗಳು ಸುತ್ತಿಕೊಂಡಿದ್ದರೂ ಅದಕ್ಕೆ ಅವುಗಳ ವಿಷವು ಅಂಟಲಾರದಷ್ಟೆ ?

ಸಂಪುಟ : ೬೭ ನವೆಂಬರ್ '೮೧ ಸಂಚಿಕೆ : ೫

**ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦**




CHITRA



# ಮರ್ಯಾದೆಯ ರಾಮಯ್ಯ

ಒಂದು ಊರಿನಲ್ಲಿ ಒಳ್ಳೆಯ ಸ್ಥಿತಿಗತಿಯುಳ್ಳವನಾಗಿ ಕುವಲಯ್ಯ ಎಂಬವನಿದ್ದನು. ಅವನ ಹೆಂಡತಿಯ ಹೆಸರು ಏನೆಂದು ಯಾರಿಗೂ ಗೊತ್ತಿಲ್ಲ. ಎಲ್ಲರೂ ಅವಳನ್ನು ಕುವಲಮ್ಮ ಎಂದೇ ಸಂಬೋಧಿಸುತ್ತಿದ್ದರು. ಏಕೆಂದರೆ ಗಂಡನು ಎಷ್ಟೊಂದು ಜಿಪುಣನಾಗಿದ್ದನೋ ಅವಳೂ ಅಷ್ಟೇ ಜಿಪುಣೆ. ಈ ದಂಪತಿಗಳಿರುವ ಮನೆಯ ನೆರೆಯಲ್ಲಿ ಅವರಿಗೆ ವಿರುದ್ಧ ಗುಣವುಳ್ಳವರಾದ ರಾಮಯ್ಯನೂ ರಾಮಮ್ಮನೂ ದಂಪತಿಗಳಾಗಿದ್ದರು. ಅವರಿಬ್ಬರಿಗೂ ದಯಾಗುಣ, ಕನಿಕರದ ಮೃದುವಾದ ಗುಂಡಿಗೆ.

ಕುವಲಯ್ಯನು ಬಡ್ಡೀ ವ್ಯವಹಾರ ನಡೆಸುವವನಾಗಿದ್ದನು. ಬರುವ ಹಣವನ್ನೆಲ್ಲ ಗಂಟು ಕಟ್ಟುವುದರ ಹೊರತು ಖರ್ಚು ಮಾಡುವ ಮಾತೇ ಇಲ್ಲ. ಅವರ ತೋಟದಲ್ಲಿ ಹಣ್ಣುಗಳ ಮರಗಳಿದ್ದುವು. ಆ ಹಣ್ಣುಗಳಲ್ಲಿ ಒಂದೇ ಒಂದಾದರೂ ನೆರೆಮನೆಯವರಿಗೆ ಕೊಡದೆ ಕುವಲಯ್ಯ ದಂಪತಿಗಳು ತಾವೇ ತಿಂದು ತೀರಿಸುವರು. ಮನೆಯಲ್ಲಿ ಯಾವಾಗಲೋ ಒಂದು ದಿನ ಮಾತ್ರ ಅಡಿಗೇ ಮಾಡಿಕೊಳ್ಳುವರು. ಯಾರು ಊಟಕ್ಕೆ ಕರೆದರೂ ಆತುರದಿಂದ ಹೋಗಿ ಹೊಟ್ಟೆ ತುಂಬಾ ಊಟ ಮಾಡಿ ಬಂದು ಬಿಡುವರು. ದಿನದಿಂದ ದಿನಕ್ಕೆ ದೊಡ್ಡದಾಗುವ ಹಣದ ಗಂಟನ್ನು ನೋಡುತ್ತಾ ಬಿಚ್ಚಿ ಎಣಿಸುತ್ತಾ ಹೊಟ್ಟೆ ತುಂಬಿದಷ್ಟು ಆನಂದಪಡುವರು.

ಒಂದು ದಿನ ರಾತ್ರಿ ಕುವಲಯ್ಯನು ವಠಾರದಲ್ಲಿ ತಿರುಗಾಡುತ್ತಿದ್ದಾಗ ಮರದಿಂದ ಒಂದು ಚಿಕ್ಕು ಹಣ್ಣು ಉದುರಿ ಗೋಡೆಯ ಮೇಲೆ ಬಿದ್ದು ನೆರೆಮನೆಯ ವಠಾರಕ್ಕೆ ಜಾರಿ ಹೋದುದನ್ನು ನೋಡಿದನು. ಅದನ್ನು ನೋಡಿ ಕುವಲಯ್ಯನ ಮನಸ್ಸು ದೊಡ್ಡ ನಷ್ಟವಾದಂತೆ ಸಂಕಟಗೊಂಡಿತು. ಹೆಂಡತಿಯನ್ನು ಕರೆದು, "ಏನು ಮಾಡಲೇ? ಒಂದು ಹಣ್ಣು ವ್ಯರ್ಥವಾಯಿತಲ್ಲಾ!" ಎಂದು ನಡೆದ ಸಂಗತಿ ಹೇಳಿದನು.

"ಅದಕ್ಕೆ ಯಾಕ್ರಿ ಯೋಚನೆ? ಗೋಡೆ ಹಾರಿ ತರಬಾರದೆ?" ಎಂದಳು.

ಕುವಲಯ್ಯ ಹಾಗೆಯೇ ಆಚೆಗೆ ಗೋಡೆಯನ್ನು ಹಾರಿದನು. ಆ ಹಣ್ಣು ಸಿಕ್ಕಿತು. ಆಗ ರಾಮಯ್ಯನ ಮನೆಯ ಅಡಿಗೇ ಮನೆಯ ಬಾಗಿಲು ಅರ್ಧ ತೆರೆದಿರುವುದನ್ನು ನೋಡಿದನು. ಅವರಿನ್ನೂ ನಿದ್ದೆ



ಮಾಡಿಲ್ಲವೇನೋ. ಸ್ವಲ್ಪ ಮಾತಾಡಿಸಿ ಬಿಡೋಣ ವೆಂದುಕೊಂಡು ಕುವಲಯ್ಯ ಬಾಗಿಲವರೆಗೂ ಹೋದನು. ಆದರೆ ಅಡಿಗೆ ಮನೆಯಲ್ಲಿ ಯಾರೂ ಕಾಣಲಿಲ್ಲ. ಅಡಿಗೇ ಪದಾರ್ಥಗಳ ಸುವಾಸನೆ ಮಾತ್ರ ಅವನ ಮೂಗಿಗೆ ಘಮಾಯಿಸಿತು. ಕುವಲಯ್ಯ ತಟ್ಟನೆ ಒಳಗೆ ಹೊಕ್ಕು ಎಲ್ಲವನ್ನೂ ನೋಡಿದನು. ಅವನ ಬಾಯಿಯಲ್ಲಿ ಜೊಲ್ಲಿಳಿಯಿತು. ಮಾಡಿಟ್ಟ ಪದಾರ್ಥಗಳನ್ನೆಲ್ಲ ಪಂಚೆಯಲ್ಲಿ ಕಟ್ಟಿಕೊಂಡು, ಹೊರಬಿದ್ದು ಚಿಕ್ಕು ಹಣ್ಣಿನೊಂದಿಗೆ ಗೋಡೆ ಹಾರಿ ತನ್ನ ಮನೆಗೆ ಬಂದನು. ನಡೆದ ಸಂಗತಿಯನ್ನು ನೋಡಿ ಅವನ ಹೆಂಡತಿ ಅವನು ಮಾಡಿದ ಕೆಲಸ ವನ್ನು ಮೆಚ್ಚಿಕೊಂಡಳು. ಆ ರಾತ್ರಿ ಅವರಿಬ್ಬರಿಗೂ ಒಳ್ಳೆಯ ಔತಣದೂಟವಾಯಿತು.

ಮರುದಿನ ರಾಮಯ್ಯನ ಮನೆಯಲ್ಲಿ ಏನಾದರೂ ಗಲಾಟೆ ಕೇಳಿಸುತ್ತದೋ ಎಂದು ಕುವಲಯ್ಯ ದಂಪತಿ ಗಳು ಕಿವಿಗಳನ್ನು ತೀಡಿಕೊಂಡಿದ್ದರು. ಹಾಗೇನೂ ಅಲ್ಲಿ ನಡೆಯಲಿಲ್ಲ.

"ಅವರು ಸ್ವಲ್ಪವೂ ಲಕ್ಷ್ಯವಿಲ್ಲದ ಮನುಷ್ಯರು. ಅಡಿಗೆ ಮಾಡಿಟ್ಟದ್ದೆಲ್ಲಾ ಕಾಣದೆ ಹೋದರೆ ಹೀಗೆ ಸುಮ್ಮನಿರುವುದುಂಟೆ ?" ಎಂದನು ಕುವಲಯ್ಯ.

"ಇಂಥವರ ಮನೆಯೊಳಗಿನಿಂದ ದಿನಾ ಅನ್ನ ಎತ್ತಿಕೊಂಡು ಬಂದರೂ ಅವರಿಗೆಚಿಂತೆಯೇನಿಲ್ಲ." ಎಂದಳು ಕುವಲಮ್ಮ.

ಹೀಗೆ ಹೆಂಡತಿಯ ಪ್ರೋತ್ಸಾಹ ಸಿಕ್ಕಿದ ಮೇಲೆ ಕೇಳಬೇಕೆ ? ಆ ರಾತ್ರಿ ಕೂಡಾ ಕುವಲಯ್ಯ ಗೋಡೆ ಧುಮುಕಿದನು. ಈ ದಿನ ರಾಮಯ್ಯನ ಮನೆಯ ಅಡಿಗೇ ಕೋಣೆಯ ಬಾಗಿಲು ಹಾಕಿಕೊಂಡಿತ್ತು. ಆದರೆ ಮುಟ್ಟಿದ ಕೂಡಲೇ ತನ್ನಂತೆ ತೆರೆದು ಕೊಂಡಿತು. ಕುವಲಯ್ಯ ಒಳಗೆ ಹೋಗಿ ಅನ್ನದ ತಪಲೆಯನ್ನು ಎತ್ತಿ ಸುರಿದು ಗಂಟು ಕಟ್ಟಿಕೊಂಡು ಹೊರಟುಬಿಟ್ಟನು.

ಮೂರನೇ ದಿನ ಕುವಲಯ್ಯ ಗೋಡೆ ಹಾರಿ ಬಂದು ರಾಮಯ್ಯನ ಅಡಿಗೇ ಕೋಣೆಯ ಬಾಗಿಲು ತೆರೆದನು. ಅಲ್ಲಿ ಸಿದ್ಧವಾಗಿರಿಸಿದ್ದ ಅಡಿಗೇ ಪದಾರ್ಥ ಗಳು ಮಾತ್ರವಲ್ಲದೆ, ಎರಡು ಮಣೆಗಳನ್ನೂ, ಅವುಗಳ ಮುಂದೆ ಎರಡು ಬಾಳೆಯೆಲೆ ಹರಡಿರುವು ದನ್ನೂ ಕಂಡನು.

ನೋಡಿದ ಕೂಡಲೇ ತುಸು ಗಾಬರಿಯಾಯಿತು ; ತನ್ನ ಸಂಗತಿ ರಾಮಯ್ಯನಿಗೆ ತಿಳಿದುಬಿಟ್ಟಿತೇನೋ ಎಂದು. ಸ್ವಲ್ಪ ಹೊತ್ತು ಆಲಿಸಿ ನಿಂತನು. ಯಾವ ಸದ್ದೂ ಬರಲಿಲ್ಲ. ಧೈರ್ಯಮಾಡಿ, ಅಡಿಗೇ ಪದಾರ್ಥ ಗಳನ್ನು ಆ ಎರಡು ಎಲೆಗಳಲ್ಲಿ ಹಾಕಿ, ಸುರುಟಿ ಬಟ್ಟೆಗೇರಿಸಿ ಹಿಡಿದುಕೊಂಡು, ಗೋಡೆ ಹಾರಿ ಮನೆ ಸೇರಿಕೊಂಡನು. ಮರುದಿನ ರಾಮಯ್ಯನ ಮನೆಯ ಮುಂದೆ ಅನೇಕ ಜನರು ಗುಂಪುಗೂಡಿದ್ದರು. ಏನು ವಿಶೇಷವೋ ಎಂದುಕೊಳ್ಳುತ್ತ ಕುವಲಯ್ಯನೂ ಅಲ್ಲಿಗೆ ಹೋದನು.

ರಾಮಯ್ಯ ಅಲ್ಲಿ ಸೇರಿದ ಜನರನ್ನು ನೋಡಿ, "ಹೌದೌದು. ನೀವು ಕೇಳಿದ ಸಮಾಚಾರ ನಿಜವೇ. ನಮ್ಮ ಮನೆಗೆ ದಿನಾ ಭಗವಂತನು ಬಂದು ಊಟ ಮಾಡಿ ಹೋಗುತ್ತಾನೆ. ಮೊದಲನೇ ದಿನ ನಮಗೆ ಹಸಿವಿಲ್ಲದೆ ಮಾಡಿದ ಅಡಿಗೇ ಪದಾರ್ಥಗಳೆಲ್ಲ ಹಾಗೇ ಉಳಿದಿತ್ತು. ನಾಯಿಯೋ ಬೆಕ್ಕೋ ತಿನ್ನಲೆಂದು ಬಾಗಿಲು ತೆರೆದಿಟ್ಟದ್ದೆವು. ಅಂತಲೇ ನಾಯಿ ತಿಂದಿತೆಂದು ಮೊದಲು ಅಂದುಕೊಂಡೆ. ನಿಜವನ್ನು ತಿಳಿಯೋಣವೆಂದುಕೊಂಡು ಮಾರಣೇ ದಿನ ಹೆಚ್ಚಿಗೆ ಅಡಿಗೆ ಮಾಡಿದೆವು. ಮನೆಯ ಬಾಗಿಲು ಸುಮ್ಮನೆ ಹಾಕಿಟ್ಟೆವು. ಆದರೂ ಮಾಡಿದ ಅಡಿಗೇ ಪದಾರ್ಥಗಳೆಲ್ಲಾ ಮಾಯವಾದುವು. ಇದು ನಾಯಿಯ ಕೆಲಸವೋ, ದೇವನ ಕೆಲಸವೋ ನೋಡೋಣವೆಂದುಕೊಂಡು ಮೂರನೇ ದಿನ, ಅಡಿಗೆ ಮಾಡಿ ಎರಡು ಬಾಳೆಯೆಲೆಗಳನ್ನೂ ಹಾಸಿ, ಮಣೆಗಳನ್ನೂ ಇಟ್ಟೆವು. ಈಸಾರಿ ಬಾಳೇ ಎಲೆಗಳೊಂದಿಗೆ ಅಡಿಗೇ ಮಾಡಿಟ್ಟದ್ದೆಲ್ಲಾ ಮಾಯವಾದುವು. ಅಂದರೆ ಇದು ನಾಯಿಯ ಕೆಲಸವಲ್ಲ. ತಪ್ಪದೆ ಭಗವಂತನ ಕೆಲಸವೇ ಆಗಿರಬೇಕು. ಅಲ್ಲವೇನು ?" ಎಂದನು.

ಕೂಡಿದ ಜನರು "ಹೌದು ಹೌದು" ಎಂದರು. ಈ ವಿಚಿತ್ರವನ್ನು ನೋಡಬೇಕೆಂದು ದಿನಾ ರಾತ್ರಿಯಲ್ಲಿ ಜನರು ರುಮಯ್ಯನ ವಠಾರದಲ್ಲಿ ಕೂಡತೊಡಗಿದರು. ಒಂದು ವಾರ ಕಳೆದರೂ ದೇವನು ಬರುವುದು ಕಾಣಲಿಲ್ಲ. "ಎಲ್ಲರ ಇದಿರಿಗೆ ದೇವನು ಬರಲಾರನು" ಎಂದನು ರಾಮಯ್ಯ. ಅದು ನಿಜವೆಂದು ಜನರಿಗೆಲ್ಲ ತೋರಿತು. ಅನಂತರ ಸುತ್ತುಮುತ್ತಲಿನ ಜನರು ರಹಸ್ಯದಲ್ಲಿ ಅಡಗಿಕೊಂಡಿದ್ದು ಹೊಂಚು ಹಾಕಲು ತೊಡಗಿದರು.

ಪಾಪ, ಕುವಲಯ್ಯನಿಗೆ ಇದು ಬಹುಳ ಸಂಧಿಗ್ಧ ಸಮಸ್ಯೆಯಾಯಿತು. ಅವನು ತನ್ನೊಳಗೆ "ರಾಮಯ್ಯನೊಬ್ಬ ಹೆಡ್ಡನಾದುದರಿಂದ ಭಗವಂತನೇ ಬಂದು ತಿಂದು ಹೋಗುವನೆಂದು ಅಂದುಕೊಂಡಿದ್ದಾನೆ. ಅದೇನೋ ಚೆನ್ನಾಗಿದೆ. ಆದರೆ ನಡುವಿನಲ್ಲೇ ಇದೇನು ಉಪದ್ರ ! ಜನರೆಲ್ಲ ಹೀಗೆ



ಕಾವಲು ಕಾಯುತ್ತಾ ಇದ್ದರೆ ನಾನು ಹೊಟ್ಟೆಗೆ ಏನು ಮಾಡಬೇಕು ? ದೇವನು ಬರುವನೆಂದು ಆ ಮೂಢ ಅವನಂಥ ಮೂಢರ ಗುಂಪಿನೊಂದಿಗೆ ಎಲ್ಲೋ ಅಡಗಿ ಅಡಿಗೆ ಮನೆಯನ್ನೇ ನೋಡಿ ಕೊಂಡಿದ್ದರೆ ಏನು ಮಾಡಲಪ್ಪಾ ! "

ಹೀಗೆಂದುಕೊಂಡು ಕುವಲಯ್ಯ ತನ್ನ ಹೆಂಡತಿಯ ಆಲೋಚನೆ ಕೇಳಿದನು. ಆ ಪ್ರಚಾರವನ್ನು ದಾರಿ ತಿರುಗಿಸಬೇಕೆಂದುಕೊಂಡು ಕುವಲಮ್ಮ ರಾಮಮ್ಮನ ಬಳಿಗೆ ಹೋಗಬೇಕೆಂದಾಯಿತು. ಹಾಗೆಯೇ ಕುವಲಮ್ಮ ರಾಮಮ್ಮನ ಬಳಿಗೆ ಹೋಗಿ, " ಇದೇನಮ್ಮಾ ವಿಚಿತ್ರ ! ದಿನಾ ದೇವನು ಬಂದು ನಿಮ್ಮ ಅಡಿಗೇ ಮನೆಯ ಊಟ ಉಂಡು ಹೋದರೆ ಈ ಸಂಗತಿಯನ್ನು ನೀವು ಊರಿಗೆಲ್ಲಾ ತಿಳಿಸಿದ್ದು ಎಂಥ ಪಾಪ ಕೆಲಸವಾಯಿತು ! ಈಗ ಭಗವಂತ ಬರೋದನ್ನೇ ಬಿಟ್ಟ ! ನಿಮಗೆ ಪಾಪ, ಸುಳ್ಳುಗಾರರು ಅಂತ ಕೆಟ್ಟ ಹೆಸರು ಬರುತ್ತಲ್ಲಮ್ಮಾ ! ಈ ವಿಷಯ ಗುಟ್ಟಾಗೇ ಇಟ್ಟುಕೊಳ್ಳಬೇಕಾಗಿತ್ತು " ಎಂದಳು.

" ನಮ್ಮವರು ಅಂಥಾ ದಡ್ಡರೇನಲ್ಲಮ್ಮಾ. ಇವರದು ಕರಗುವ ಹೃದಯ ಅಷ್ಟೇ " ಎಂದಳು ರಾಮಮ್ಮ. " ಅಂದರೆ ? " ಎಂದು ಕುವಲಮ್ಮ ಆಶ್ಚರ್ಯದಿಂದ ಕೇಳಿದಳು.

" ಹೌದಮ್ಮಾ, ಬಂದು ತಿಂದುಂಡು ಎಲ್ಲಾ ಮಾಯ ಮಾಡುವವನು ಭಗವಂತ ಅಲ್ಲವೆಂದೂ ಮನುಷ್ಯನೆಂದೂ ನಮ್ಮವರಿಗೆ ಗೊತ್ತಿದೆ. ಆದರೆ ಅಷ್ಟು ರಹಸ್ಯವಾಗಿ ಬಂದು ಹೊಟ್ಟೆಗೆ ಬೇಕಾದ್ದು ಮಾತ್ರ ತಿನ್ನುವವನೆಂದರೆ ಅವನು ಹೊಟ್ಟೆಗಾಗಿ ಎಷ್ಟು ಕಷ್ಟದಲ್ಲಿದ್ದಾನೆಂಬುದನ್ನು ಅರ್ಥ ಮಾಡಿಕೊಳ್ಳ ಬಹುದು. ಅಂಥವನು ಪಾಪ ಹುಟ್ಟು ದರಿದ್ರನಾಗಿರಬೇಕು. ಅನ್ನಾರ್ತರಿಗೆ ಊಟ ಸಿಕ್ಕಿದರೆ ಅದು ಭಗವಂತನಿಗೆ ಕೊಟ್ಟ ಹಾಗೇ ಅಂತ ಅವರು ಯಾವಾಗಲೂ ಹೇಳುತ್ತಾರೆ. ಆದಕ್ಕೇ ನಾವು ಎಲೆ ಕೂಡಾ ಹಾಕಿ ಅವನು ಸೊಗಸಾಗಿ ಉಂಡು ಹೋಗಲು ಸಿದ್ಧಮಾಡಿಡುತ್ತೇವೆ " ಎಂದಳು ರಾಮಮ್ಮ. "ನಿಮ್ಮವರ ಕರಗುವ ಹೃದಯವೆಂಬುದು



ಚೆನ್ನಾಗಿಯೇ ಇದೆ. ಅಡಿಗೆ ಮನೆಗೆ ಬಂದು ಖಾಲಿ ಮಾಡಿ ಹೋಗುವವನು ಹುಟ್ಟ ಹರಿದ್ರನಾಗದೆ, ಒಳ್ಳೆಯ ಸ್ಥಿತಿಯವನೇ ಅಂತ ನಿಮಗೆ ಸಂಶಯಕೂಡ ಬರಲಿಲ್ಲವೇ ? " ಎಂದು ಕುವಲಮ್ಮ ಕೇಳಿದಳು.

ಒಂದು ವೇಳೆ ತಮ್ಮ ಸಂಗತಿ ರಾಮಮ್ಮನಿಗೆ ಗೊತ್ತಾಗಿ ಬಿಟ್ಟಿದ್ದರೆ, ಈ ಪ್ರಶ್ನೆಯಿಂದ ಆ ಗುಟ್ಟು ಹೊರಗಾಗುವುದೆಂದು ಕುವಲಮ್ಮ ಹಾಗೆ ಕೇಳಿದ್ದಳು.

"ಒಳ್ಳೇ ಸ್ಥಿತಿಯವನೇ ಆಗಿದ್ದರೆ ಹೀಗೆ ಕಳ್ಳತನ ದಿಂದ ಬಂದು ಹೋಗುವುದು ತುಂಬಾ ನಾಚಿಕೆ ಗೇಡಿನ ವಿಷಯವಾಯಿತಲ್ಲ ! ತಾನು ಮಾಡುವ ಈ ನಾಚಿಕೆ ಗೇಡಿನ ಕೆಲಸ ಹೊರಬಿದ್ದರೆ ಅವನಿಗೆ ತುಂಬಾ ಅವಮಾನದಿಂದ ಮೋರೆ ಎತ್ತಲಾಗದೆ ಹೋಗುತ್ತದೆ. ಅವನಿಗೆ ಹತ್ತುಮಂದಿಯ ಮುಂದೆ ಹಾಗೆ ಅವಮಾನ ಗೊಳಿಸುವುದು ಅವರಿಗೆ ಇಷ್ಟವಿಲ್ಲ. ಅದಕ್ಕೇ ಯಾರಿಗೂ ಕಾಣದ ದೇವರ ಹೆಸರು ಹೇಳುತ್ತಿದ್ದಾರೆ " ಎಂದಳು ರಾಮಮ್ಮ.

"ಹಾಗಿರುವಾಗ ಈ ಪ್ರಚಾರವೆಲ್ಲಾ ಏತಕ್ಕೆ ? ಗುಟ್ಟಾಗಿ ಅಂಥಾ ಕೆಲಸ ಮಾಡುವವನು ಈ ಪ್ರಚಾರದಿಂದ ತಾನೇ ಬರುವುದನ್ನು ನಿಲ್ಲಿಸಿದ್ದಾನೆ ? ನಿಮ್ಮ ಮನೆಯ ವಠಾರದಲ್ಲಿ ದೇವನನ್ನು ನೋಡ ಬಹುದೆಂಬ ಆಶೆಯಿಂದ ಯಾವಾಗಲೂ ಯಾರೋ ಒಬ್ಬರು ರಹಸ್ಯವಾಗಿ ನೋಡುತ್ತಾ ಇದ್ದಾರೆಂಬ ಭಯದಲ್ಲಿ ಅವನು ಬರುವುದನ್ನೇ ಬಿಟ್ಟನೆಂದು ಕಾಣುತ್ತದೆ." ಎಂದಳು ಕುವಲಮ್ಮ.

"ನಮಗೆ ಬೇಕಾದುದೂ ಅದೇ ಕುವಲಮ್ಮಾ, ನಾವೇ ಅಡಿಗೆ ಕೋಣೆಯಲ್ಲಿ ಹೊಂಚು ಹಾಕಿ ಅವನು ಯಾರೆಂದು ತಿಳಿದುಕೊಳ್ಳ ಬಹುದಿತ್ತು. ಆದರೆ ಅವನು ನಮಗೆ ಸ್ನೇಹಿತನೋ, ಹತ್ತಿರದ ನೆರೆಕರೆಯವನೋ ಆಗಿದ್ದರೆ ಅವನ ಮುಖದ ಮುಂದೆಯೇ ನಿಂದಿಸಿ ಅವಮಾನಪಡಿಸಲಾರೆವಷ್ಟೆ? ಗುಟ್ಟಾಗಿ ಬಂದು ಮಾಡುವ ಇಂಥ ನಾಚಿಕೆಗೇಡಿನ ಕೆಲಸವನ್ನು ನಿಲ್ಲಿಸಲಿಕ್ಕಾಗಿಯೇ ನಾವು ಈ ಮರ್ಯಾದೆಯ ಪದ್ಧತಿಯನ್ನು ಆರಿಸಿಕೊಂಡೆವು. ಏನನ್ನುವಿ ? " ಎಂದಳು ರಾಮಮ್ಮ.

"ಅದು ನಿಜ" ಎಂದು ಕುವಲಮ್ಮ ಬಾಡಿದ ಮುಖದಿಂದ ಹಿಂದಿರುಗಿದಳು. ತಮ್ಮ ಸಂಗತಿ ಅವರಿಗೆ ತಿಳಿದುಹೋಯಿತೆಂದೂ, ತಮ್ಮ ಕೆಟ್ಟ ನಡತೆಯನ್ನು ಬಿಡಿಸಲಿಕ್ಕಾಗಿ ಇಂತಹ ಮರ್ಯಾದೆಯ ಕ್ರಮವನ್ನು ಅನುಸರಿಸಿದರೆಂದೂ ಕುವಲಮ್ಮನಿಗೆ ಅರ್ಥ ವಾಯಿತು.

ಅವಳು ಮನೆಗೆ ಬಂದು ನಡೆದ ಸಂಗತಿಯನ್ನು ಗಂಡನೊಡನೆ ಹೇಳಿದರು. ಆದಿನಂದಿದ ಕುವಲಯ್ಯ ದಂಪತಿಗಳ ಜಿಪುಣ ತನವು ಕ್ರಮವಾಗಿ ತಗ್ಗುತ್ತಾ ಹೋಯಿತು.






## ೧೮

[ಶಿಥಿಲ ನಗರದಿಂದ ಓಡಿಹೋಗುವ ವ್ಯಾಘ್ರದತ್ತ ಮತ್ತು ಸಮರಸೇನನಿಗೆ ಏಕಾಕ್ಷಿ ಮಾಂತ್ರಿಕನು ಇದಿರಾದನು. ಆಗ ಸಮರಸೇನನು ಸಮಯಸ್ಫೂರ್ತಿಯಿಂದ ವ್ಯಾಘ್ರದತ್ತನನ್ನು ಮೋಸಪಡಿಸಿ ತಾನು ತಪ್ಪಿಸಿಕೊಂಡನು. ತನ್ನ ವಿರೋಧಿಯಾದ ಸಮರಸೇನನನ್ನು ಹತಗೊಳಿಸಲು ವ್ಯಾಘ್ರದತ್ತನ ಸಹಾಯ ಬೇಕೆಂದು ಧೂರ್ತನಾದ ಏಕಾಕ್ಷಿ ಮಾಂತ್ರಿಕನಿಗೆ ತೋರಿತು.]

ವ್ಯಾಘ್ರದತ್ತನು ಹೇಳಿದ ಮಾತುಗಳಿಂದ ಏಕಾಕ್ಷಿ ಮಾಂತ್ರಿಕನಿಗೆ ಆಗುವ ಹೋಗುವ ಪರಿಸ್ಥಿತಿ ಪೂರಾ ಅರ್ಥವಾಯಿತು. ತನ್ನ ಹಾಗೆಯೇ ವ್ಯಾಘ್ರದತ್ತನೂ ಸಮುದ್ರದಲ್ಲಿ ಧನರಾಶಿಗಳಿಂದ ತುಂಬಿರುವ ನಾವೆಯನ್ನು ವಶಪಡಿಸುವ ಪ್ರಯತ್ನದಲ್ಲಿರುವನೆಂದು ತಿಳಿದುಕೊಂಡನು. ಹಾಗಿರುವಾಗ ತಾವಿಬ್ಬರೂ ಒಂದಾಗುವುದರಿಂದ ಚತುರ್ನೇತ್ರನನ್ನೂ, ಅವನ ಸ್ನೇಹಿತನಾದ ಸಮರಸೇನನನ್ನೂ ಹತಮಾಡಲು ಅನುಕೂಲವಾದ ಬಲದ ಸಹಾಯ ತನಗೆ ಸಿಕ್ಕಿದಂತಾಯಿತೆಂದು ಏಕಾಕ್ಷಿಮಾಂತ್ರಿಕನಿಗೆ ತೋರಿತು.

"ಸರಿಸರಿ, ನನಗೆಲ್ಲಾ ಗೊತ್ತಾಯಿತು. ಆದರೆ ನಮ್ಮ ಗುರಿಯಾಗಿರುವ ಧನರಾಶಿಯ ನಾವೆಯನ್ನು ವಶಪಡಿಸಿಕೊಳ್ಳಲು ಮಾನವಮಾತ್ರರಿಗೆ ಸಾಧ್ಯವಲ್ಲ ಎಂಬ ಸಂಗತಿ ನಿನಗೆ ಗೊತ್ತಿಲ್ಲವೆಂದು ಕಾಣುತ್ತದೆ. ನೀನು ಯಾವ ನಂಬುಗೆಯ ಆಧಾರಂದ ಈ ಸಾಹಸಕ್ಕೆ ಇಳಿದಿರುವಿ?" ಎಂದು ಪ್ರಶ್ನೆ ಮಾಡಿದನು ಏಕಾಕ್ಷಿ.

ಅದಕ್ಕೆ ವ್ಯಾಘ್ರದತ್ತನು ತಲೆಯಾಡಿಸುತ್ತ, "ಶಾಕ್ತೇಯನ ಮಹಾ ತ್ರಿಶೂಲವಿದೆಯಷ್ಟೆ? ಅದೊಂದಿದ್ದರೆ ಸಾಕಲ್ಲಾ?" ಎಂದನು.



ಶಾಕ್ತೇಯನ ಮಹಾ ತ್ರಿಶೂಲದ ಹೆಸರು ಕೇಳಿದ ಕೂಡಲೇ ಏಕಾಕ್ಷಿ ಮಾಂತ್ರಿಕನಿಗೆ ಸಿಡಿಲ್ಪೆಟ್ಟಂತಾಯಿತು. ತನಗೂ ಚತುರ್ನೇತ್ರನಿಗೂ ಮಾತ್ರವೇ ಆ ತ್ರಿಶೂಲದ ರಹಸ್ಯ ತಿಳಿದಿರುವುದೆಂದು ನಂಬಿದುದು ತಪ್ಪಾಯಿತೆನಿಸಿತು.

ಆಗ ಮಾಂತ್ರಿಕನ ಮುಂದೆ ಭೀತನಾಗಿದ್ದ ವ್ಯಾಘ್ರದತ್ತನು, ಆ ತ್ರಿಶೂಲವು ಆನೆಗಳ ವನದಲ್ಲಿ ಗುರುದ್ರೋಹಿಯ ಅಸ್ಥಿಪಂಜರದಲ್ಲಿರುವುದೆಂದೂ, ಶಿವದತ್ತನು ಕೂಡಾ ಅದಕ್ಕಾಗಿ ಪ್ರಯತ್ನಿಸುತ್ತಿರುವನೆಂದೂ, ಸಮರಸೇನನೂ ಸಹಾ ಅಲ್ಲಿಗೇ ಹೋಗಿರಬಹುದೆಂದೂ ಹೇಳಿಬಿಟ್ಟನು. ಅದನ್ನೆಲ್ಲ ಕೇಳಿ ಏಕಾಕ್ಷಿ ಮಾಂತ್ರಿಕನು ಕೋಪದಿಂದ ನಡುಗಿದನು.

"ಹಾಗಾದರೆ, ವ್ಯಾಘ್ರದತ್ತಾ, ಈ ಕಾರ್ಯವನ್ನು ಸಾಧಿಸಲಿಕ್ಕೆ ನಾವಿಬ್ಬರೂ ಒಬ್ಬರಿಗೊಬ್ಬರು ಸಹಾಯಕರಾಗಿರಲೇ ಬೇಕಾಗಿದೆ. ಸಮರಸೇನನಿಗೆ ಚತುರ್ನೇತ್ರನೆಂಬ ಕ್ಷುದ್ರ ಮಾಂತ್ರಿಕನೊಬ್ಬ ಈ ಕಾರ್ಯಕ್ಕೆ ಸಹಾಯಮಾಡುವ ಹಾಗಿದೆ. ಆದುದರಿಂದ ಮುಂದಾಗಿ ನಾವು ಶಿಥಿಲನಗರವನ್ನು ಸೇರಿ ಶಾಕ್ತೇಯನ ತ್ರಿಶೂಲವನ್ನು ವಶಪಡಿಸಿಕೊಂಡು ಬಿಡಬೇಕು, ಅಲ್ಲಿಗೆ ನಡೆ, ಹೋಗೋಣ" ಎಂದನು ಏಕಾಕ್ಷಿ. ಅವರು ಸ್ವಲ್ಪ ದೂರ ಬೇಗಬೇಗನೇ ಹೋಗುತ್ತಿರಲು, ಏಕಾಕ್ಷಿ ತನ್ನ ಮಂತ್ರದ ಚಾರರನ್ನು ನೋಡಿ, "ಹೇ! ಕಪಾಲಾ! ಕಾಲಭುಜಂಗಾ! ನೀವು ಮುಂದಾಗಿ ಹೋಗಿ ಆ ಸಮರಸೇನನನ್ನು ಹುಡುಕಬೇಕು. ಅವನು ಮುಂದೆಬಾರದ ಹಾಗೆ ತಡೆಯಬೇಕು!" ಎಂದು ಆಜ್ಞೆ ಮಾಡಿದನು.

"ಹಾಗೆಯೇ ಗುರೂ!" ಎಂದು ಅವೆರಡೂ ಹೊರಟುಹೋದುವು. ಮತ್ತೆ ಸ್ವಲ್ಪ ಹೊತ್ತಿಗೆಲ್ಲಾ ಏಕಾಕ್ಷಿಯೂ ವ್ಯಾಘ್ರದತ್ತನೂ ಬೆಚ್ಚಿಬೀಳುವ ಹಾಗೆ ಕರಿಗೂಗೆಯ ಕರ್ಕಶ ಕಂಠಸ್ವರವು ಕೇಳಿಬಂದಿತು. "ಓ! ಚತುರ್ನೇತ್ರಾ! ಏಕಾಕ್ಷಿ! ಏಕಾಕ್ಷಿ!" ಎಂದು ಆ ಕರಿ ಗೂಗೆ ಏಕಾಕ್ಷಿಯ ತಲೆಯಮೇಲೆಯೇ ಸುತ್ತುತ್ತಾ ಒಂದೇಸಮನೆ ಅರಚ ತೊಡಗಿತು.

ಏಕಾಕ್ಷಿ ಮಾಂತ್ರಿಕನು ಹೆದರುವುದನ್ನು ನೋಡಿ ವ್ಯಾಘ್ರದತ್ತನೂ ಅಂಜಿಕೆಯಿಂದ ಜರ್ರನೆ ಇಳಿದುಹೋದನು. ಏಕಾಕ್ಷಿ ಕಂಪಿಸುವ ಸ್ವರದಿಂದ, "ಕಪಾಲಾ! ಕಾಲಭುಜಂಗಾ! ಇತ್ತ ಬನ್ರೋ!" ಎಂದು ಕೂಗ ತೊಡಗಿದನು.

ಆದರೆ ಏಕಾಕ್ಷಿ ಎಷ್ಟೇ ಕೂಗಿದರೂ ಅವನ ಚಾರಶಕ್ತಿಗಳು ಅಲ್ಲಿಗೆ ಬರಲೇ ಇಲ್ಲ. ಅವನು ಏನು ಮಾಡುವುದೆಂದು ಯೋಚಿಸುವಾಗ, ಕರಿಗೂಗೆ ಅಲ್ಲಿಂದ ದೂರಕ್ಕೆ ಹಾರಿಹೋಯಿತು. ಅದು ಚತುರ್ನೇತ್ರನನ್ನು ಕರೆತರಲಿಕ್ಕೇ ಓಡಿರಬೇಕು.

"ನಡೆ ಹೋಗೋಣ" ಎಂದು ಏಕಾಕ್ಷಿ ಧೈರ್ಯದಿಂದ ಮುಂದಡಿ ತೆಗೆದನು, ವ್ಯಾಘ್ರದತ್ತನೂ ನಡೆದನು. ಸ್ವಲ್ಪಹೊತ್ತಿಗೆ ವ್ಯಾಘ್ರದತ್ತನು ಒಂದು ಸ್ಥಳದಲ್ಲಿ ನಿಂತು, "ಇದೇ ಆನೆಗಳ ವನ. ಹೆದೆ

ಬಿಚ್ಚಿ ಭುಸುಗುಡುತ್ತಿರುವ ಹಾವುಗಳಂತಹ ಎಲೆ ತುಂಬಿದ ಈ ಮರವೇ ವಿಷವೃಕ್ಷ, ಅಲ್ಲಿ ಕಾಣುವ ಸಮಾಧಿಯ ಅಡಿಯಲ್ಲಿಯೇ ಶಾಕ್ತೇಯನ ತ್ರಿಶೂಲವಿದೆ " ಎಂದನು.

ಆ ಮಾತು ಕೇಳಿ ಏಕಾಕ್ಷಿಗೆ ಆನಂದವೆದ್ದಿತು. "ಸರಿ. ವ್ಯಾಘ್ರದತ್ತಾ, ಅಕೋ ಅಲ್ಲಿ ಬರುವ ಶಿವದತ್ತನನ್ನು ನಿನ್ನ ಭಟರೊಂದಿಗೆ ಇದಿರಿಸು. ಇಷ್ಟರೊಳಗೆ ತ್ರಿಶೂಲವನ್ನು ಕೈಗೆತ್ತಿಕೊಳ್ಳುವ ಕೆಲಸ ನಾನು ಮಾಡುತ್ತೇನೆ. ನಿನ್ನ ಭಟರು ಶಿವದತ್ತನನ್ನು ಮುಂದೆಬಿಡದೆ ತಡೆಯಲಿ" ಎಂದು ವ್ಯಾಘ್ರದತ್ತನನ್ನು ಹುರಿದುಂಬಿಸಿದನು.

ವ್ಯಾಘ್ರದತ್ತನು ಹಿಂದೆ ಮುಂದೆ ನೋಡದೆ ಇರುವ ಕೆಲವುಂದಿ ಭಟರೊಂದಿಗೆ ಶಿವದತ್ತನ ಅನುಚರರ ಕಡೆಗೆ ಧಾವಿಸಿದನು. ಶಿವದತ್ತನ ಕಡೆಯವರು ವ್ಯಾಘ್ರ ದತ್ತನ ಭಟರಿಗಿಂತ ಮೂರು ಪಾಲು ಹೆಚ್ಚಾಗಿದ್ದರು. ಆ ಕಾರಣದಿಂದ ವ್ಯಾಘ್ರದತ್ತನ ಭಟರು ಸಾವಿನ ಕೂಗು ತೆಗೆಯುತ್ತಾ ಬಡಬಡ ಬೀಳತೊಡಗಿದರು.

ಈ ಪರಿಸ್ಥಿತಿಯಲ್ಲಿ ತನಗೆ ಬರಲಿರುವ ಅಪಾಯುವೇನೆಂದು ಏಕಾಕ್ಷಿಗೆ ಗೊತ್ತಾಯಿತು. ಅವನು ಗಂಟಲು ಹರಿದುಹೋಗುವ ಹಾಗೆ ದೊಡ್ಡ ಸ್ವರದಿಂದ "ಕಪಾಲಾ ! ಕಾಲಭುಜಂಗಾ!" ಎಂದು ಕೂಗಿದನು. ಕೂಡಲೇ ಅವನ ಆ ಮಂತ್ರಚಾರಕ ಗಳು ಅಲ್ಲಿಗೆ ಬಂದುವು.

ಅವುಗಳನ್ನು ನೋಡಿದ ಕೂಡಲೇ ಶಿವದತ್ತನ ಭಟರು ಹೆದರಿಬಿದ್ದೆದ್ದು ಓಡಿ ಹೋಗ ತೊಡಗಿದರು. ಆಗ ಏಕಾಕ್ಷಿ," ವ್ಯಾಘ್ರದತ್ತಾ ! ಇದೀಗ ನಮಗೆ ಒಳ್ಳೇ ಸಮುಯ ! ಆ ಸಮಾಧಿಯನ್ನು ನಿನ್ನ ಭಟರಿಂದ ಬೇಗನೇ ಅಗೆಯಿಸು ! ಬೇಗ! ಬೇಗ!" ಎಂದು ಅವಸರಪಡಿಸಿದನು.

ವ್ಯಾಘ್ರದತ್ತನಿಗೂ ತನ್ನ ವಿಜಯವು ನಿಸ್ಸಂದೇಹ ವೆಂದು ಧೈರ್ಯಬಂತು. ಸಮರಸೇನನೂ ಚತುರ್ನೇತ್ರನೂ ಅಲ್ಲಿಗೆ ಬರುವುದರೊಳಗೆ ತಾನು ಆ ದಿವ್ಯಶಕ್ತಿಯ ತ್ರಿಶೂಲವನ್ನು ಕೈಗೆತ್ತಿಕೊಂಡರೆ ಮತ್ತೆ ಎಂಥಾ ಮಾಂತ್ರಿಕರೂ ಮಣ್ಣು ಮುಕ್ಕ






ಬೇಕಾದ್ದೇ ! ಅವನು ಅತ್ಯುತ್ಸಾಹದಿಂದ ತನ್ನ ಭಟರನ್ನು ಕರೆಯುತ್ತ, ಮುಂದೆ ಹೋಗಿ ಸಮಾಧಿಯನ್ನು ತಾನೇ ಅಗೆಯ ತೊಡಗಿದನು. ಆ ಸಮಯದಲ್ಲಿ ಅಲ್ಲಿಗೆ ನೂರು ಗಜ ದೂರದಲ್ಲಿರುವ ವಿಷವೃಕ್ಷದ ಕಡೆಯಿಂದ " ಹೂಂ ಹೂಂ " ಎಂದು ಮೂಲುಗು ದನಿ ಹೊರಡತೊಡಗಿತು. ಹಾವಿನ ಹೆಡೆಗಳಂತಿರುವ ಆ ಮರದ ಎಲೆಗಳು ಭುಸುಗುಟ್ಟ ತೊಡಗಿದುವು.

ಅದನ್ನು ನೋಡಿ ಏಕಾಕ್ಷಿ ಮಾಂತ್ರಿಕನು ಮಂತ್ರ ದಂಡವನ್ನು ತಿರುಗಿಸುತ್ತಾ ಆ ವಿಷವೃಕ್ಷದ ಕಡೆಗೆ ಹೋದನು. ಇನ್ನೊಂದು ಕೈಯಲ್ಲಿ ಕತ್ತಿಯನ್ನೆತ್ತಿಕೊಂಡು ಯಾವುದೋ ಮಂತ್ರವನ್ನು ಪಠಿಸ ತೊಡಗಿದನು. ಅಷ್ಟರಲ್ಲಿ ವ್ಯಾಘ್ರದತ್ತನ ಕಂಠದಿಂದ ಆರ್ತನಾದವು ಹೊರಡ ತೊಡಗಿತು. ಅದನ್ನು ಕೇಳಿ ಏಕಾಕ್ಷಿ ಬೆಚ್ಚಿಬಿದ್ದು ಹಿಂದಿರುಗಿ ನೋಡಿದನು. ಚತುರ್ನೇತ್ರನ ಚಾಕರವಾದ ನರವಾನರವು ವ್ಯಾಘ್ರದತ್ತನನ್ನು ಕೈಗಳಲ್ಲಿ ಬಂಧಿಸಿ ಗಿರಿಗಿರಿ ತಿರಿಗಿಸಿಕೊಂಡಿದ್ದಿತು. ಕರಿಗೂಗೆ "ಏಕಾಕ್ಷಿ ! ಏಕಾಕ್ಷಿ !" ಎನ್ನುತ್ತ ವಿಷವೃಕ್ಷದ ಕಡೆಗೆ ಬರುತ್ತಿತ್ತು.

ಇದನ್ನು ನೋಡಿ ಏಕಾಕ್ಷಿ ಹೆದರಿ ಕೈ ಕಾಲು ಗೆಟ್ಟನು. ತಾನು ಶಾಕ್ತೇಯನ ತ್ರಿಶೂಲವನ್ನು ಹುಡುಕಿ ಹಿಡಿಯುವುದಕ್ಕೆ ಮೊದಲೇ, ಚತುರ್ನೇತ್ರನೂ ಸೈನಿಕರೊಂದಿಗೆ ಸಮರಸೇನನೂ ಅಲ್ಲಿಗೆ ಬರುವರೇನೋ ಎಂದು ಅವನಿಗೆ ಭಯವಾಯಿತು. ಅವನು ಕಾಲಭುಜಂಗವನ್ನು ಕರೆದು ನರವಾನರವನ್ನು ಓಡಿಸಲು ಆಜ್ಞೆ ಮಾಡಿದನು. ತನ್ನ ಕಡೆಗೆ ಬರುವ ಕಾಲಭುಜಂಗವನ್ನು ನೋಡಿ ನರವಾನರವು ವ್ಯಾಘ್ರದತ್ತನನ್ನು ದೂರ ದಲ್ಲಿರುವ ಕಲ್ಲು ದಿಣ್ಣೆಗಳ ಮೇಲಕ್ಕೆ ಬಿಸುಟು ಕಾಲಭುಜಂಗದ ಮೇಲೆ ಬಿದ್ದಿತು. ಅವೆರಡೂ ಹೋರಾಡುವಾಗ, ಆಕಾಶದಲ್ಲಿ ಕರಿಗೂಗೆಯೂ ಕಪಾಲವೂ ಒಂದರೊಡನೊಂದು ಗುದ್ದಿಕೊಳ್ಳು ತ್ತಿದ್ದುವು. ನರವಾನರದಿಂದ ಕಲ್ಲುಗಳ ಮೇಲೆ ಬಿದ್ದ ವ್ಯಾಘ್ರದತ್ತನು ನಾಲ್ಕಾರು ಸಾಯುವ ಆರ್ತಧ್ವನಿ ತೆಗೆದು ನಿಃಶಬ್ದನಾದನು.

ಏಕಾಕ್ಷಿ ಮಾಂತ್ರಿಕನು ಹೆದರಿದ ಹಾಗೆಯೇ ಆಯಿತು. ಚತುರ್ನೇತ್ರನು ಗಂಭೀರಕಂಠದಲ್ಲಿ " ಭಲೇ ನರವಾನರಾ ! ಭಲೇ ಉಲೂಕಾ !" ಎಂದು ಕೂಗಿ ಹೇಳುತ್ತಾ ಅಲ್ಲಿಗೆ ಬಂದೇ ಬಂದನು. ಸಮರಸೇನನೂ ಕೆಲಮಂದಿ ಸೈನಿಕರೂ ಅವನೊಂದಿ ಗಿದ್ದರು. ಓಡಿ ಹೋಗಲು ನೋಡಿದ ಶಿವದತ್ತನೂ, ಅವನ ಅನುಚರನೂ ತಮ್ಮ ಕಡೆಗೆ ಸಹಾಯಕರು ಬಂದರೆಂಬ ಹೊಸ ಉತ್ಸಾಹದಿಂದ ಆ ಪ್ರದೇಶಕ್ಕೆ ತಿರುಗಿ ಬರುತ್ತಿದ್ದರು. ಅಳಿದುಳಿದ ವ್ಯಾಘ್ರದತ್ತನ ಭಟರು ಇದಿರಿಸಿ ತಡೆಯಲು ಪ್ರಯತ್ನಿಸುತ್ತಿದ್ದರು.

ನರವಾನರವು ಕಾಲಭುಜಂಗದ ವಿಷದ ಕೋರೆ ಗಳಿಂದ ತಪ್ಪಿಸಿಕೊಳ್ಳುತ್ತಾ ಅದನ್ನು ದೊಡ್ಡದೊಂದು

ಕಲ್ಲಿನ ಗದೆಯಿಂದ ಹೊಡೆಯುತ್ತಿದ್ದಿತು. ಕರಿಗೂಗೆ ಕೂಡಾ ಮಂತ್ರಕಪಾಲದ ಬೊಚ್ಚುಬಾಯಿಗೆ ಸಿಕ್ಕದೆ ತಪ್ಪಿಸಿಕೊಳ್ಳುತ್ತಾ, ಕಾಲಿನಿಂದ ಅದನ್ನು ಒದೆಯುತ್ತಾ, ಮೂಗಿನಿಂದ ತಿವಿಯುತ್ತಾ ಸಾಕುಸಾಕೆನಿಸುವಂತೆ ಹೋರಾಡುತ್ತಿದ್ದಿತು.

ಈಗ ತನ್ನ ಪರಿಸ್ಥಿತಿ ಗಂಡಾಂತರಕ್ಕೆ ಬಿತ್ತೆಂದು ತಿಳಿದ ಏಕಾಕ್ಷಿ ಮಾಂತ್ರಿಕನು ಕತ್ತಿಯನ್ನು ಹಿರಿದು ಗರ್ಜಿಸುತ್ತಾ ಚತುರ್ನೇತ್ರನ ಮೇಲೆ ಹಾರಿಬಂದನು. ಚತುರ್ನೇತ್ರನು ಸ್ವಲ್ಪವೂ ಹಿಂಜರಿಯದೆ ಅವನನ್ನು ಇದಿರಿಸಿ ಹೊಡೆದನು. ಆ ಸಮಯದಲ್ಲಿ ಚತುರ್ನೇತ್ರನು ಹೇಳಿದಂತೆ ಸಮರಸೇನನು ಸೈನಿಕರ ಸಹಾಯದೊಂದಿಗೆ ಸಮಾಧಿಯನ್ನು ಅಗೆಯುವ ಕೆಲಸಕ್ಕೆ ತೊಡಗಿಬಿಟ್ಟನು.




ಈ ಮೊದಲೇ ವ್ಯಾಘ್ರದತ್ತನಿಂದ ಸ್ವಲ್ಪ ಅಗೆಯಲ್ಪಟ್ಟಿದ್ದ ಆ ಸಮಾಧಿ ಇನ್ನಿಷ್ಟು ಅಗೆಯಲ್ಪಟ್ಟಂತೆ ಸಮಾಧಿಯೊಳಗಿನಿಂದ ವಿಚಿತ್ರವಾದ ಕೂಗು, ವಿಕೃತವಾದ ನಗುವಿನ ಶಬ್ದಗಳು ಹೊರಡ ತೊಡಗಿದುವು.

ಸಮರಸೇನನು ಸ್ವಲ್ಪವೂ ಹೆದರಲಿಲ್ಲ. ತಮ್ಮ ನಾಯಕನ ಎದೆಗಾರಿಕೆಯನ್ನು ನೋಡಿದ ಸೈನಿಕರು ಕೂಡಾ ನಿರ್ಭಯವಾಗಿ ಸಮಾಧಿಯನ್ನು ಅಡಿಯ ವರೆಗೂ ಅಗೆದು ಹಾಕಿದರು.

ಸಮಾಧಿಯ ತಳದಲ್ಲಿ ಒಂದೇ ಒಂದು ಅಸ್ಥಿ ಪಂಜರವು ಕಂಡು ಬಂತು. ಅದು ಗುರುಧ್ರೋಹಿ ಶಿಷ್ಯನ ಅಸ್ಥಿಪಂಜರವೆಂದು ಸಮರಸೇನನಿಗೆ ಗೊತ್ತಾಯಿತು. ಆ ಅಸ್ಥಿಪಂಜರದ ಗುಂಡಿಗೆಗೆ ಚುಚ್ಚಿಕೊಂಡಿತ್ತು ಶಾಕ್ತೇಯನ ಮಹತ್ವದ ತ್ರಿಶೂಲ. ಸಮರಸೇನನು ನಡುಗುವ ಕೈಗಳಿಂದ ಆ ತ್ರಿಶೂಲವನ್ನು ಹಿಡಿದು ಹೊರಕ್ಕೆ ಎಳೆದನು. ಆಗ ಅಸ್ಥಿಪಂಜರವು ಕರ್ಕಶವಾಗಿ ಅರಚಿತು, ಮರುಕ್ಷಣದಲ್ಲಿ ಅಸ್ಥಿಪಂಜರವು ಆಕಾಶದ ಮೇಲಕ್ಕೆ ಹಾರುತ್ತಾ, "ಗುರೋ ಶಾಕ್ತೇಯಾ! ಇಂದಿಗೆ ನನ್ನ ಪಾಪದ ಶಾಪಕ್ಕೆ ಮುಕ್ತಿಸಿಕ್ಕಿತು. ನಾನು ಮತ್ತೆ ಶಮಣ ದ್ವೀಪಕ್ಕೆ ಹೋಗುತ್ತೇನೆ" ಎಂದು ರಿವ್ವನೆ ಆಕಾಶ ಮಾರ್ಗದಲ್ಲಿ ಹೊರಟು ಹೋಯಿತು.

ಅಸ್ಥಿಪಂಜರವು ಆ ವಿಧವಾಗಿ ಹೇಳುತ್ತ ಆಕಾಶ ಮಾರ್ಗದಲ್ಲಿ ಹಾರಿಹೋದುದನ್ನು ನೋಡಿ ಅಲ್ಲಿದ್ದವರಲ್ಲಾ ಹೆದರಿ ತರಗೆಲೆಯಂತೆ ನಡುಗಿದರು. ಏಕಾಕ್ಷಿ ಎತ್ತಿದ್ದ ಕತ್ತಿಯನ್ನು ಹಾಗೇ ಹಿಡಿದು ಕೊಂಡು, ಹಾರಿಹೋಗುತ್ತಿರುವ ಗುರುದ್ರೋಹಿಯ ಅಸ್ಥಿಪಂಜರವು ಮರೆಯಾಗುವವರೆಗೂ ನೋಡುತ್ತ ನಿಂತನು. ಸಮರಸೇನನು ಚತುರ್ನೇತ್ರನನ್ನು ಸಮೀಪಿಸಿ ಶಾಕ್ತೇಯನ ತ್ರಿಶೂಲವನ್ನು ಅವನ ಕೈಗೆ ಒಪ್ಪಿಸಿದನು.

ಅಸ್ಥಿಪಂಜರವು ಮಾಯವಾದ ಮೇಲೆ ಏಕಾಕ್ಷಿ ತನ್ನ ದೃಷ್ಟಿಯನ್ನು ಚತುರ್ನೇತ್ರನ ಕಡೆಗೆ ಇಳಿಸಿದನು. ಆಗ ಚತುರ್ನೇತ್ರನ ಕೈಯಲ್ಲಿ ಥಳಥಳಿಸುವ

శాక్త్రేయన త్రిశూలవన్ను నోడి, తలెయ మేలె సిడిలు బడెదవనంతె "సత్త్రనల్లో! కపాలా! కాలభజంగా!" ఎందు కెట్టదనియింద కూగి ఓడి హోగలు తొడగిదను.

"చతుర్నేత్రా! ఆ పాపియన్ను జీవ దొందిగె ఓడలు బిడబారదు" ఎందను సమరసేన, అవన మాతిగె చతుర్నేత్రను నక్కు, "సమరసేనా! ఏకాక్షి ఎల్లిగూ ఓడి హోగ లారను. యావాగ యావ క్షణదల్లి బేకాదరూ, అవను ఎల్లి అడగికొండిద్దరూ కూడా ఈ త్రిశూలవు అవనన్ను నాశమాడి బిడబల్లుదు. ఇదో నోడు" ఎందు త్రిశూలవన్ను ఏకాక్షియ కడెగె బిసుడుత్త "ఆ గురుద్రోహియ తమ్మనాద ఈ ఏకాక్షియన్ను కొందు బా" ఎందను. శాక్త్రేయన త్రిశూలవు మించిన వేగదల్లి ఆకాశ మార్గవాగి హారిహోగి, ఓడుత్తిరువ ఏకాక్షి మాంత్రికనన్ను దాటికొండు ముందె హోయితు. బళిక ఇమ్మడి వేగదల్లి హిందిరుగి ఏకాక్షియ గుండిగెయన్ను భేదిసితు. "హా!" ఎందు ఆర్తనాద మాడుత్తా ఏకాక్షి నెలక్కె బిద్దను. త్రిశూలవు మత్తె చతుర్నేత్రన బళిగె బందు అవన కై సేరితు.

"చతుర్నేత్రా, ఇన్ను కపాల మత్తు కాల భుజంగగళన్నూ కొనెగాణిసబేకు" ఎందు సమరసేనను జ్ఞాపకపడిసిదను.

"అవుగళింద ఇన్నేనూ ఆగదు. ఏకాక్షి బిద్ద మేలె కపాలవు కేవల తలెబురుడెయే. కాలభుజంగవు మామూలు హావినంతె అకో అత్త ఓడి హోయితు!" ఎందను చతుర్నేత్ర, ఆమేలె చతుర్నేత్రను, "ఇన్ను స్వల్పవూ తడమాడబారదు. పూర్వ తీరక్కె హోగి ధన



రాశియ ఆ నావెయన్ను వశపడిసికొళ్ళువ సమయ సన్నిహితవాయితు, నడెయిరెల్లా" ఎందను చతుర్నేత్ర.

ఎల్లరూ అరణ్యద దారియ మూలక, గుడ్డ కణివెగళల్లి నడెదు మారణేదిన సాయంకాలద హొత్తిగె పూర్వ సముద్ర తీరవన్ను సేరిదరు. అల్లియ సముద్రదల్లి ధనరాశిగళింద తుంబిద నావెయూ అదన్ను కాయుత్తిద్ద నాగకన్యెయూ సముద్రదల్లి తేలికొండిరువుదు కాణిసితు.

చతుర్నేత్రను తన్న కైయల్లిద్ద శాక్త్రేయన అపూర్వ శక్తియ త్రిశూలవన్ను మంత్రిసి ఆ నావెయ కడెగె బీసి ఒగెదను. త్రిశూలవు మహావేగదింద రొయ్యనె హోగి ఆ నావె యన్ను తాగితు. మరుక్షణదల్లి నాగకన్యె నావెయ చుక్కాణియన్ను హిడిదు అదన్ను తీరక్కె తందు సేరిసి తాను కెళగిళిదు తలె తగ్గిసి నింతళు.

ಅವಳನ್ನು ನೋಡಿ ಚತುರ್ನೇತ್ರನು "ನಾನು ಶಮಣ ದ್ವೀಪದ ರಾಜನಾದ ಶಾಕ್ತೇಯನ ಶಿಷ್ಯ. ನನ್ನ ಹೆಸರು ಚತುರ್ನೇತ್ರ. ಇದು ಮಂತ್ರ ಶಕ್ತಿಯುಳ್ಳ ಆ ಗುರುವಿನ ತ್ರಿಶೂಲ. ಗುರುವಿನ ಆಜ್ಞೆ ಗೊತ್ತಿದೆ ತಾನೇ ? ಆ ಪ್ರಕಾರ ನೀನು ನನ್ನ ಹೆಂಡತಿ " ಎಂದನು.

ಆ ಮಾತನ್ನು ಕೇಳಿ ನಾಗಕನ್ಯೆ ಮುಗುಳು ನಗುತ್ತಾ ಚತುರ್ನೇತ್ರನಿಗೆ ನಮಸ್ಕಾರ ಮಾಡಿದಳು. ಸಮರಸೇನನೂ ಸೈನಿಕರೂ ಉತ್ಸಾಹದಿಂದ ಜಯಜಯಾಕಾರ ಮಾಡಿದರು.

ಚತುರ್ನೇತ್ರನು ಸಮರಸೇನನ ಕಡೆಗೆ ತಿರುಗಿ, "ಸಮರಸೇನಾ, ಈ ದಿನದಿಂದ ನಾನು ಅರ್ಧಾಂಗಿಯನ್ನು ಪಡೆದು ಪೂರ್ಣಾಂಗನಾದೆನು. ನಾನೂ ಈ ನಾಗಕನ್ಯೆಯೂ ಗಂಡಹೆಂಡಿರಾಗುತ್ತೇವೆ. ಇನ್ನು ನಾವಿಬ್ಬರೂ ಈ ಮಂತ್ರದ್ವೀಪದಲ್ಲಿ ಪ್ರಶಾಂತವಾಗಿ ಕಾಲಕಳೆಯಲಿದ್ದೇವೆ. ನೀನು ಯಾವ ಕಾರ್ಯಕ್ಕಾಗಿ ಬಂದೆಯೋ ಆ ಕೆಲಸ, ಧೂಮಕೇತು ದರ್ಶನದಿಂದ ಅಡಿಗಡಿಗೂ ಗಂಡಾಂತರಕಾರಿಯಾದರೂ, ಕುಂಡಲಿನೀ ದೇವಿಯ ಕೃಪೆಯಿಂದ ಜಯಪ್ರದವಾಗಿ ಮುಗಿಯಿತು. ನಾವೆಯೊಳಗಿನ ಅಪಾರ ಧನರಾಶಿಯೊಂದಿಗೆ ನೀನು ನಿನ್ನ ಕುಂಡಲಿನೀದ್ವೀಪಕ್ಕೆ ಹೋಗಬಹುದು. ನಿನ್ನ ಹಡಗುಗಳೂ ಪರಿವಾರದವರೂ ನಿನ್ನ ದಾರೀಕಾಯುತ್ತಿದ್ದಾರೆ" ಎಂದನು.

ಸಮರಸೇನನು ತನ್ನ ಪ್ರಯಾಣದ ಸನ್ನದ್ಧತೆಗಳನ್ನು ಬೇಗಬೇಗನೆ ಮಾಡಿದನು. ಚತುರ್ನೇತ್ರನಿಗೆ ಆವನು ತನ್ನ ಹೃತ್ಪೂರ್ವಕವಾದ ಕೃತಜ್ಞತೆ ತಿಳಿಸಿನು. ಚತುರ್ನೇತ್ರನು ಅವನನ್ನು ಆಶೀರ್ವಾದ ಮಾಡಿ, ತನ್ನ ಪತ್ನಿಯಾದ ನಾಗಕನ್ಯೆಯ ಕೈ ಹಿಡಿದುಕೊಂಡು ಅರಣ್ಯದ ಕಡೆಗೆ ಹೊರಟುಹೋದನು.

ಭೂಕಂಪನಗಳಿಂದಲೂ ಭಯಂಕರ ಮೃಗಗಳಿಂದಲೂ ತುಂಬಿಕೊಂಡಿರುವ ಆ ಮಂತ್ರದ್ವೀಪವು ತನ್ನಂಥವರಿಗೆ ಯೋಗ್ಯವಲ್ಲವೆಂದು ಶಿವದತ್ತನು ನಿಶ್ಚಯಿಸಿ, ತನ್ನ ಅನುಚರರೊಂದಿಗೆ ಸಮರಸೇನನ ಜತೆಯಲ್ಲಿ ಕುಂಡಲಿನೀ ದ್ವೀಪಕ್ಕೇ ಹೊರಟನು. ಪ್ರಶಾಂತವಾಗಿರುವ ಸಾಗರದಲ್ಲಿ ಒಂದು ತಿಂಗಳು ಪ್ರಯಾಣಮಾಡಿದ ಮೇಲೆ ಒಂದುದಿನ ಬೆಳಗ್ಗಿನ ಹೊತ್ತಿನಲ್ಲಿ ಎಲ್ಲರೂ ಕ್ಷೇಮವಾಗಿ ಕುಂಡಲಿನೀ ದ್ವೀಪ ರಾಜ್ಯವನ್ನು ಸೇರಿದರು.

ಬಹಳಕಾಲ ಪತ್ತೆಯಿಲ್ಲದೆ ಹೊದ ಸಮರಸೇನನೂ ಸೈನಿಕರೂ ಅಪಾರ ಧನದೊಂದಿಗೆ ತಿರುಗಿ ಬಂದುದನ್ನು ನೋಡಿ, ಚಿತ್ರಸೇನರಾಜನೂ ಪ್ರಜೆಗಳೂ ಅವರನ್ನು ಘನವಾದ ಸ್ವಾಗತೋತ್ಸವ ಪೂರ್ವಕವಾಗಿ ಬರಮಾಡಿಕೊಂಡರು. ಕುಂಡಲಿನೀ ದ್ವೀಪವು ವೈಭವದಿಂದ ಮೆರೆಯಿತು. (ಮುಗಿಯಿತು)





# ಕತ್ತಿ ಹಿಡಿದ ಮಂತ್ರಿ

ಎಂತಹ ಪಂಥವನ್ನಾದರೂ ನಿಂತಲ್ಲೇ ತೀರಿಸಿ ಬಿಡ ಬಲ್ಲವನಾದ ತ್ರಿವಿಕ್ರಮ ಮಹಾರಾಜನು, ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಭುಜದ ಮೇಲೆ ಹೇರಿಕೊಂಡು, ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯು ತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ನಿನಗಿರುವಂತಹ ಉದಾರ ಗುಣವು ಎಲ್ಲರಿಗೂ ಇರುವುದೆಂದು ನಂಬುವಿಯಾ ? ಇತರರಿಗೆ ಒಳಿತಾಗ ಬೇಕೆಂದು ನೀನೇನೋ ತುಂಬಾ ಪೆಣಗಾಡುವಿ. ಇದನ್ನು ನೋಡಿ ನನಗೆ ತುಂಬಾ ಕನಿಕರ ವೆನಿಸುತ್ತದೆ. ಒಂದೊಂದು ಸಾರಿ ಉಪಕಾರ ಹೊಂದಿದವರು ಕೃತಜ್ಞತೆಗೆ ಬದಲಾಗಿ ದೂಷಣೆ ಯನ್ನೂ, ತಿರಸ್ಕಾರವನ್ನೂ ತೋರಿಸುವುದುಂಟು. ಇದಕ್ಕೆ ಉದಾಹರಣೆಯಾಗಿ ನಿನಗೆ ಸೌಗಂಧರಾಜನ ಕಥೆಯನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾನಡೆ" ಎಂದು ಹೀಗೆ ಕಥೆಯನ್ನು ಪ್ರಾರಂಭಿಸಿತು :

ಬೇತಾಳ ಕಥೆಗಳು?...



ಸೌಗಂಧದೇಶದ ರಾಜನಾದ ಗುಣಪಾಲನಿಗೆ ರಣಪಾಲನೆಂಬ ಮಗನಿದ್ದನು. ಹಾಗೆಯೇ ಆ ರಾಜನ ಮಂತ್ರಿಗೆ ಜಯವರ್ಮನೆಂಬ ಮಗನೂ ಸೇನಾಪತಿಗೆ ವೀರಸಿಂಹನೆಂಬ ಮಗನೂ ಇದ್ದರು. ಆ ಮೂವರು ಕುಮಾರರೂ ಕೆಲವು ತಿಂಗಳು ಹೆಚ್ಚು ಕಡಿಮೆಯವರಾಗಿ ಒಂದೇ ವಯಸ್ಸಿನವರು. ಮೂವರೂ ಒಬ್ಬ ಗುರುವಿನ ಬಳಿಯಲ್ಲಿ ಒಟ್ಟಿಗೇ ವಿದ್ಯಾಭ್ಯಾಸ ಮಾಡುತ್ತ ದೊಡ್ಡವ ರಾಗುತ್ತಿದ್ದಂತೆ, ಎಲ್ಲಾ ವಿದ್ಯೆಗಳಲ್ಲಿಯೂ ಉತ್ತೀರ್ಣರಾದರು. ಮುಂದೆ ರಣಪಾಲನು ಸಿಂಹಾಸನಕ್ಕೆ ಬಂದಾಗ, ಅವನಿಗೆ ಮಂತ್ರಿಯಾಗಿ ಜಯವರ್ಮನೂ, ಸೇನಾಪತಿಯಾಗಿ ವೀರಸಿಂಹನೂ ಬರುವರೆಂದು ಮೊದಲಿನಿಂದಲೂ ನಿಶ್ಚಯಿಸಲ್ಪಟ್ಟ ಮಾತು.

ಯುವರಾಜ ರಣಪಾಲನಿಗೆ ಬೇಟೆಯ ಮೇಲೆ ತುಂಬ ಇಷ್ಟ. ಒಂದು ದಿನ ಅವನು ಮಂತ್ರಿಯ ಮಗ ಜಯವರ್ಮನನ್ನೂ, ಸೇನಾಪತಿಯ ಮಗ ವೀರಸಿಂಹನನ್ನೂ, ಕೆಲಮಂದಿ ಪರಿವಾರದವರನ್ನೂ ಕರೆದುಕೊಂಡು ಬೇಟೆಯಾಡಲು ಹೊರಟನು.

ಸೂರ್ಯೋದಯವಾಗುವಾಗ ಅರಣ್ಯವನ್ನು ಸೇರಿ ಬೇಟೆಗೆ ಪ್ರಾರಂಭಮಾಡಿದವರು, ಸಾಯಂಕಾಲದ ವರೆಗೂ ಉತ್ಸಾಹದಿಂದ ಮೈಮರೆತು ಬೇಟೆಯಾಟವಾಡಿದರು. ಇಂತಹ ಸಮಯದಲ್ಲಿ ರಣಪಾಲನಿಗೆ ಹಸಿವೆ ನೀರಡಿಕೆಗಳ ಪರಿವೆಯೂ ಇರುತ್ತಿದ್ದಿಲ್ಲ. ಆ ದಿನ ಅವನು ಅನೇಕ ಕ್ರೂರ ಮೃಗಗಳನ್ನೂ, ಜಿಂಕೆಗಳನ್ನೂ ಬೇಟೆಯಾಡಿ ಚೆನ್ನಾಗಿ ಬಳಲಿದನು. ಸಂಜೆದಾಟಿ ಇದಿರುಗತ್ತಲೆಯ ವೇಳೆಯಲ್ಲಿ ಒಂದು ಹುಲಿ ಹಠಾತ್ತಾಗಿ ಪೊದೆಗಳ ಮರೆಯಿಂದ ರಣಪಾಲನ ಮೇಲೆ ಹಾರಿತು. ಆಗ ರಣಪಾಲನು ಈ ದಾಳಿಯನ್ನು ಇದಿರುಗೊಳ್ಳುವ ತಯಾರಿಕೆಯಲ್ಲಿರಲಿಲ್ಲ. ಹುಲಿಯ ಪಂಜಾ ಏಟಿಗೆ ಅವನು ಆಹುತಿಯಾಗುವವನೇ! ಅದೇ ಸಮಯಕ್ಕೆ ಸೇನಾಧಿಪತಿಯ ಮಗ ವೀರಸಿಂಹನು ಮುಂದೆ ಹಾರಿ ರಣಪಾಲನಿಗೆ ಅಡ್ಡನಿಂತು ಹುಲಿಯೊಡನೆ ಕಲೆಬಿದ್ದು ಅದನ್ನು ಕೊಂದುಬಿಟ್ಟನು.

ಪ್ರಾಣಾಪಾಯದ ಸಮಯದಲ್ಲಿ ಮಿಂಚಿನ ವೇಗದಲ್ಲಿ ಬಂದು ತನ್ನನ್ನು ಕಾಪಾಡಿದ ವೀರಸಿಂಹನನ್ನು ರಣಸಿಂಹನು ಗಾಢಾಲಿಂಗನ ಮಾಡಿಕೊಂಡು "ಮಿತ್ರಾ! ಈ ದಿನ ನನ್ನ ಪ್ರಾಣ ನಿನ್ನಿಂದ ಉಳಿಯಿತು. ನೀನು ಸಮಯಕ್ಕೆ ಸರಿಯಾಗಿ ಅಡ್ಡಬರದಿರುತ್ತಿದ್ದರೆ ನಾನು ಹುಲಿಯ ಕೈಯಲ್ಲಿ ಸಾಯುವವನೇ!" ಎಂದನು, ಹೃತ್ಪೂರ್ವಕ ಕೃತಜ್ಞತೆಯಿಂದ.

ವೀರಸಿಂಹನು ಸಂತೋಷದಿಂದ, "ಯುವರಾಜಾ! ಇದು ನನ್ನ ಧರ್ಮ! ಹೆಚ್ಚೇನೂ ಹೊಗಳುವಂತೆ ಮಾಡಿಲ್ಲ" ಎಂದನು.

ಆಮೇಲೆ ಅವರೆಲ್ಲರೂ ನಗರದ ಕಡೆಗೆ ಹೊರಟರು. ಯುವರಾಜ ರಣಪಾಲನೂ, ಮಂತ್ರಿಯ ಮಗ ಜಯವರ್ಮನೂ ಮುಂದಿನಿಂದ ನಡೆಯುತ್ತಿದ್ದರು.

ವೀರಸಿಂಹನು ಪರಿವಾರದೊಳಗಿನ ಮುಖ್ಯನೊಬ್ಬ ನೊಂದಿಗೆ ಮಾತಾಡುತ್ತ, ಹಿಂದಿನಿಂದ ಬರುತ್ತಿದ್ದನು.

ಆ ಸಮಯದಲ್ಲಿ ಒಂದು ಹೆಮ್ಮರದ ಆಚೆಯ ಕಡೆಯಿಂದ, ಬೆಳಗ್ಗೆ ಅವರು ಆಡಿದ ಬೇಟೆಯಲ್ಲಿ ಗಾಯಗೊಂಡು ತಪ್ಪಿಸಿಕೊಂಡ ಹೆಣ್ಣು ಹುಲಿಯೊಂದು ಮಿಂಚಿನ ವೇಗದಲ್ಲಿ ಬಂದು ರಣಪಾಲನ ಮೇಲೆಯೇ ಹಾರಿತು. ತಟ್ಟನೆ ರಣಪಾಲನು ಕತ್ತಿ ಹಿರಿದು ತಡೆಯಲು, ಹುಲಿಯ ಪಂಜಾದ ಏಟಿನಿಂದ ಕತ್ತಿ ಅವನ ಕೈ ತಪ್ಪಿ ಕೆಳಗೆ ಬಿತ್ತು. ಆಗ ಮಂತ್ರಿಕುಮಾರ ಜಯವರ್ಮನು ಬಿದ್ದ ಕತ್ತಿಯನ್ನೆತ್ತಿಕೊಂಡು ಹುಲಿಯ ಗುಂಡಿಗೆಗೆ ಗುರಿಯಿಟ್ಟು ಹೊಡೆದನು. ಕೆಳಗುರುಳಿದ ಹುಲಿಯನ್ನು ಮತ್ತೆರಡು ಏಟುಗಳಿಂದ ಕೊಂದನು ಜಯವರ್ಮ. ಈ ರಗಳೆ ನಡೆಯುತ್ತಿದ್ದಾಗ ದೂರದಲ್ಲಿದ್ದ ವೀರಸಿಂಹನು ಓಡುತ್ತಾ ಅಲ್ಲಿಗೆ ಬಂದು, ಯುವರಾಜನು ಮತ್ತೊಂದು ಪ್ರಾಣಾಪಾಯದಿಂದ ತಪ್ಪಿದುದನ್ನು ನೋಡಿ, ಸಮಾಧಾನ ತಾಳಿದನು. ಆಮೇಲೆ ಎಲ್ಲರೂ ಕ್ಷೇಮವಾಗಿ ನಗರವನ್ನು ಸೇರಿದರು.

ಮಾರಣೇದಿನ ನಗರದ ಪ್ರಜೆಗಳು ಬೇಟೆಯಲ್ಲಿ ಯುವರಾಜನಿಗೆ ಬಂದ ಅಪಾಯಗಳನ್ನು ತಪ್ಪಿಸಿದ ವೀರಸಿಂಹ, ಜಯವರ್ಮರ ಸಂಗತಿ ತಿಳಿದು ಅವರಿಗೆ ತುಂಬಾ ಅಭಿನಂದನೆ ಮಾಡಿದರು. ಗುಣಪಾಲ ಮಹಾರಾಜನು ಕೂಡಾ ದೊಡ್ಡದೊಂದು ಸಭೆಯನ್ನು ಸೇರಿಸಿ ವೀರಸಿಂಹ ಜಯವರ್ಮರನ್ನೂ ಕರೆಯಿಸಿದನು. ಸಭೆಯಲ್ಲಿದ್ದ ಸೇನಾಧಿಪತಿಯೂ, ಮಂತ್ರಿಯೂ ತಮ್ಮ ಕುಮಾರರಿಗೆ ಭಾರಿ ಸನ್ಮಾನ ನಡೆಯುವುದೆಂದು ಸಂತೋಷದಲ್ಲಿದ್ದರು.

ಗುಣಪಾಲ ಮಹಾರಾಜನು ಒಮ್ಮೆ ಸಭೆಯನ್ನೆಲ್ಲಾ ನೋಡಿ, "ಸಭಾಸದರೆ, ಈ ದಿನ ಮುಖ್ಯವಾಗಿ ಹೇಳ ಬೇಕಾದ ವಿಷಯವೇನೆಂದರೆ, ನಿನ್ನಿನ



ಬೇಟೆಯಲ್ಲಿ ನಮ್ಮ ಯುವರಾಜನು ಸುರಕ್ಷಿತನಾಗಿ ಹಿಂದಿರುಗಿದುದೇ. ನನ್ನ ಕುಮಾರನೂ, ಬಾವೀ ಸೌಗಂಧದೇಶದ ರಾಜನೂ ಆದ ರಣಪಾಲನಿಗೆ ಬೇಟೆಯ ಸಮಯದಲ್ಲಿ ಇದಿರಾದ ಅಪಾಯವನ್ನು ಕುರಿತು, ನೀವೆಲ್ಲರೂ ಕೇಳಿದ್ದೀರಷ್ಟೆ? ಆಗ ನನ್ನ ಕುಮಾರನ ಪ್ರಾಣವನ್ನು ಕಾಪಾಡಿದ ಮಂತ್ರಿ ಕುಮಾರ ಜಯವರ್ಮನಿಗೆ ಈ ಪಚ್ಚೆಯಹಾರವನ್ನು ಕಾಣಿಕೆ ಕೊಡುತ್ತಾ ಪ್ರತ್ಯೇಕ ಅಭಿನಂದನೆಗಳನ್ನೂ, ನನ್ನ ಕೃತಜ್ಞತೆಯನ್ನೂ ತಿಳಿಸುತ್ತೇನೆ. ಸೇನಾನಿಯ ಕುಮಾರನಾದ ವೀರಸಿಂಹನನ್ನು ಈಸಾರಿ ಕ್ಷಮಿಸಿದ್ದೇನೆ. ಇನ್ನು ಮುಂದೆ ಅವನು ಎಚ್ಚರಿಕೆಯಿಂದ ವರ್ತಿಸತಕ್ಕದ್ದು!" ಎಂದನು.

ಈ ಮಾತುಗಳನ್ನು ಕೇಳಿ ಸಭೆಯಲ್ಲಿದ್ದವರೆಲ್ಲರೂ ಚಕಿತರಾದರು. ಅವರು ಜಯವರ್ಮನೊಂದಿಗೆ ವೀರಸಿಂಹನಿಗೂ ಸನ್ಮಾನ ನಡೆಯುವುದೆಂದು ನಂಬಿದ್ದರು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ಸೌಗಂಧರಾಜ ಗುಣಪಾಲನ ಪ್ರವರ್ತನೆ ವಿಚಿತ್ರವಾಗಿಲ್ಲವೇ ? ತನ್ನ ಕುಮಾರನ ಪ್ರಾಣವನ್ನು ಕಾಪಾಡಿದ ವೀರಸಿಂಹನನ್ನು ಸನ್ಮಾನಿಸುವುದಕ್ಕೆ ಬದಲಾಗಿ, ಈಸಾರಿ ಕ್ಷಮಿಸಿದ್ದೇನೆಂದು ತುಂಬಿದ ಸಭೆಯಲ್ಲಿ ದೂಷಿಸಿ ಮಾತಾಡಿದುದು ಕೃತಘ್ನತೆ ಅಲ್ಲವೇನು ? ಈ ಸಂದೇಹಕ್ಕೆ ಸರಿಯಾದ ಸಮಾಧಾನ ತಿಳಿದೂ ಹೇಳದೆ ಹೋದರೆ ನಿನ್ನ ತಲೆಯೊಡೆದು ಸಾವಿರ ಹೋಳಾಗುತ್ತದೆ." ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ಸೌಗಂಧಿಕ ರಾಜನ ಪ್ರವರ್ತನೆಯಲ್ಲಿ ವಿಚಿತ್ರವೂ ಇಲ್ಲ, ಕೃತಘ್ನತೆಯೂ ಇಲ್ಲ. ವೀರಸಿಂಹನು ಸೇನಾಧಿಪತಿಯ ಮಗ. ಮುಂದೆ ಸೇನಾಧಿಪತಿಯಾಗಲಿರುವವನು. ಸೇನಾಪತಿಯಾದವನು ತನ್ನ ರಾಜನ ಕ್ಷೇಮಕ್ಕಾಗಿ ಪ್ರಾಣವನ್ನು ಪಣವಾಗಿಟ್ಟು ಹೋರಾಡುವನಾಗಿರ ಬೇಕು. ರಾಜನ ಉಳಿವು ಅಳಿವುಗಳು ಸೇನಾಪತಿಯ ಪ್ರತಿಭೆಯನ್ನು ಹಿಡಿದೇ ಇರುತ್ತದೆ. ರಾಜನ ಪ್ರಾಣ ರಕ್ಷಣೆ ಸೇನಾಪತಿಯ ಪ್ರಥಮ ಕರ್ತವ್ಯ. ವಿಧ್ಯುಕ್ತ ಧರ್ಮ. ಆ ಕಾರಣದಿಂದ ರಣಪಾಲನ ಪ್ರಾಣವನ್ನು ಕಾಪಾಡುವುದು ವೀರಸಿಂಹನ ವೃತ್ತಿಧರ್ಮ ವೆನಿಸುತ್ತದೆ. ಅದು ಪ್ರತ್ಯೇಕಪ್ರಶಂಸೆಗೆ ಅರ್ಹ ವಾದುದೇನಲ್ಲ. ಜಯವರ್ಮನಾದರೋ ಮಂತ್ರಿಯ ಕುಮಾರ. ಆಲೋಚನೆ ಹೇಳುವುದಷ್ಟೇ ಮಂತ್ರಿಯ ಕೆಲಸ. ರಾಜನ ಪ್ರಾಣರಕ್ಷಣೆಗೆ ಪರೋಕ್ಷವಾಗಿ ಮಂತ್ರಿಯ ಮೇಧಾಶಕ್ತಿ ಇರುತ್ತದೆಯೇ ಹೊರತು ಪ್ರತ್ಯಕ್ಷದಲ್ಲಿ ಅಲ್ಲ. ಮಂತ್ರಿ ತಾನಾಗಿ ಕತ್ತಿ ಹಿಡಿದು ಪ್ರಾಣರಕ್ಷಣೆಗೆ ಬರಬೇಕಾಗಿದ್ದಿಲ್ಲ. ಆದರೆ ಭಾವೀ ಮಂತ್ರಿ ರಾಜನ ಆಪತ್ಸಮಯದಲ್ಲಿ ಅಡ್ಡನಿಂತು ಕತ್ತಿ ಹಿಡಿದು ಹುಲಿಯನ್ನು ಕೊಂದು ಕಾಪಾಡಿದ್ದಾನೆ. ಅದಕ್ಕೇ ರಾಜನು ಅವನನ್ನು ಪ್ರತ್ಯೇಕವಾಗಿ ಸನ್ಮಾನಿಸಿದನು. ನಿಜಕ್ಕೂ ಎರಡನೇ ಸಾರಿಕೂಡಾ ವೀರಸಿಂಹನೇ ಅಡ್ಡಬಂದು ರಣಪಾಲನನ್ನು ರಕ್ಷಿಸ ಬೇಕಾಗಿತ್ತು. ಆಪತ್ತಿನ ವಠಾರವು ಕಳೆಯುವ ವರೆಗೂ ತನ್ನ ಪ್ರಭುವನ್ನು ಸಮೀಪವಿದ್ದು ನೋಡಿಕೊಳ್ಳಬೇಕಾಗಿತ್ತು. ಆದರೆ ತನ್ನ ಬಾಧ್ಯತೆ ಯನ್ನು ಮರೆತು ಅವನು ದೂರದಲ್ಲಿದ್ದು ಬಿಟ್ಟಿದ್ದನು. ಇದು ವೀರಸಿಂಹನು ಮಾಡಿದ ಅಪರಾಧ. ಇದಕ್ಕೆ ರಾಜನು ಅವನನ್ನು ಶಿಕ್ಷಿಸಿದರೂ ತಪ್ಪಿರಲಿಲ್ಲ. ಆದರೆ ಅವನು ಹಾಗೆ ಮಾಡದೆ ತನ್ನ ಔದಾರ್ಯವನ್ನು ತೋರಿಸಿದನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವಸಮೇತ ಮಾಯವಾಗಿ ಹೋಗಿ ಎಂದಿನಂತೆ ಮರದ ಕೊಂಬೆಗೆ ಸೇರಿ ನೇತಾಡಿತು.



# ಮೋಸಕ್ಕೂ ಲೆಕ್ಕ

**ಒಂ**ದು ಊರಿನಲ್ಲಿರುವ ರಾಮನಾಥಯ್ಯನೂ, ಶಿವರಾಮಯ್ಯನೂ ಸ್ಪರ್ಧೆಗೆ ಬಿದ್ದವರ ಹಾಗೆ ಒಬ್ಬರು ಉತ್ತರ ದೇಶ ಯಾತ್ರೆಗೂ ಇನ್ನೊಬ್ಬರು ದಕ್ಷಿಣ ದೇಶ ಯಾತ್ರೆಗೂ ಹೋಗುತ್ತಿದ್ದರು. ರಾಮನಾಥಯ್ಯ ಮಾತ್ರ ಯಾತ್ರೆಯಿಂದ ಹಿಂದಿರುಗಿ ಬಂದ ಕೂಡಲೇ ಯಾತ್ರೆಯ ಸಮಯದಲ್ಲಿ ಆದ ಖರ್ಚು, ದಾರಿಯಲ್ಲಿ ಬಗೆ ಬಗೆಯ ಮೋಸಗಳಿಗೆ ಗುರಿಯಾಗಿ ಕಳೆದುಕೊಂಡ ಹಣದ ಲೆಕ್ಕ ಬರೆದು ನೋಡಿಕೊಂಡು ಸಂಕಟಪಟ್ಟುಕೊಳ್ಳುವನು. ಆದರೆ ಶಿವರಾಮಯ್ಯ ನಿಂಬೆಯ ರಸಹಿಂಡಿ ಬಿಸುಟ ಹಾಗೆ ನಿಶ್ಚಿಂತೆಯಿಂದಿರುತ್ತಿದ್ದನು.

ಅದನ್ನು ನೋಡುತ್ತಿದ್ದ ರಾಮನಾಥಯ್ಯನು, ಒಂದು ದಿನ ತಾಳಿಕೊಳ್ಳಲಾಗದೆ ಶಿವರಾಮಯ್ಯನನ್ನು ಕುರಿತು, "ಅಲ್ಲ ಶಿವರಾಮಯ್ಯಾ, ಪ್ರತಿ ವರ್ಷವೂ ದೇಶ ಯಾತ್ರೆಯಲ್ಲಿ ಬಗೆ ಬಗೆಯ ಮೋಸಗಳಿಗೆ ಗುರಿಯಾಗಿ ತುಂಬಾ ಹಣ ನಷ್ಟವಾಗಿ ನಾನು ನೊಂದುಕೊಳ್ಳುತ್ತಿದ್ದೇನೆ. ನಿಮಗೆ ಮಾತ್ರ ಅಂಥಾ ನಷ್ಟಗಳು ಬಾರದ ಹಾಗೆ ಏನು ಮಾಡುವಿರಿ ನೀವು?" ಎಂದು ಕೇಳಿದನು.

ಆ ಮಾತು ಕೇಳಿ ಶಿವರಾಮಯ್ಯ ಕಿರುನಗೆ ನಗುತ್ತ, "ಯಾತ್ರಾ ಸ್ಥಳಗಳಲ್ಲಿ ಹೊಸಬರಾದ ನಮ್ಮನ್ನು, ಆಯಾ ಸ್ಥಾನಿಕರಾಗಿರುವವರು ಯಾವುದೋ ಒಂದು ವಿಧವಾಗಿ ಮೋಸಪಡಿಸುತ್ತಾ ಇರುತ್ತಾರೆ. ಈ ಸಂಕಟವನ್ನು ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲಾನ್ನಿ. ಆದುದರಿಂದಲೇ ನಾನು ಪ್ರಯಾಣ ಕಾಲದಲ್ಲಿ ಊಟ ತಿಂಡಿ, ವಾಹನಗಳ ಬಾಡಿಗೆ, ಆಲಯದಲ್ಲಿ ಸೇವೆ ಮೊದಲಾದುವುಗಳಿಗೆ ಹಣ ಲೆಕ್ಕವಿಟ್ಟು ಕೊಳ್ಳುವ ಹಾಗೆಯೇ, ಮೋಸಗಳಿಗೆ ಗುರಿಯಾಗುವ ಖರ್ಚು ಇಂತಿಷ್ಟು ಎಂದು ಮೊದಲೇ ಲೆಕ್ಕವಿಟ್ಟುಕೊಂಡು ಹೊರಡುತ್ತೇನೆ. ಆ ಕಾರಣದಿಂದ ಆಮೇಲೆ ಸಂಕಟಪಡುವ ಅಗತ್ಯ ನನಗೆ ಬರುವುದಿಲ್ಲ" ಎಂದನು.

ಶಿವರಾಮಯ್ಯನ ನಿಶ್ಚಿಂತತೆಯ ಗುಟ್ಟು ಈಗ ತಿಳಿದು, "ಅಷ್ಟೇನಾ?" ಎಂದನು ರಾಮನಾಥಯ್ಯ.





# ಚಮತ್ಕಾರಕ್ಕೆ ಸತ್ಕಾರ

ಒಂದು ದಿನ ನಗರಕ್ಕೆ ಹೋಗುವ ದಾರಿಯ ಬದಿಯಲ್ಲಿದ್ದ ಒಂದು ದೊಡ್ಡ ಮರದ ನೆರಳಿನಲ್ಲಿ ಇಬ್ಬರು ಮನುಷ್ಯರು ಮಲಗಿಕೊಂಡಿದ್ದರು. ಅವರ ಹತ್ತಿರವಿದ್ದ ಮೂಟೆಗಳಿಗೆ ಮತ್ತೊಬ್ಬನು ಕಾವಲಾಗಿ ಕುಳಿತುಕೊಂಡಿದ್ದಂತೆ ಕಾಣುತ್ತಿತ್ತು. ಮಧ್ಯಾಹ್ನದ ಬಿಸಿಲಿನ ಧಾವೆ ಇನ್ನೂ ತಗ್ಗಿರಲಿಲ್ಲ.

ಆ ಸಮಯದಲ್ಲಿ ಆ ಮರದ ನೆರಳಿಗೆ ಇನ್ನೊಬ್ಬನು ಬಂದು, ಅವರಿಗೆ ಸ್ವಲ್ಪ ದೂರದಲ್ಲಿ ನೆರಳು ನೋಡಿ ವಿಶ್ರಾಂತಿಗೆ ಕುಳಿತನು. ಈ ಹೊಸದಾಗಿ ಬಂದ ನಾಲ್ಕನೆಯವನು ಒಳ್ಳೆಯ ದುಸ್ತಿನಲ್ಲಿ ಧನಿಕನ ಹಾಗೆ ಕಾಣುತ್ತಿದ್ದನು.

ನಾಲ್ಕನೆಯವನು ಕಾವಲು ಕುಳಿತಿರುವವನನ್ನು ದಿಟ್ಟಿಸಿ ನೋಡಿದನು. ಅವರು ತುಂಬ ಬಡವರಾಗಿರುವಂತೆ ಅವನಿಗೆ ಅನಿಸಿತು. ಅವರನ್ನು ನೋಡುತ್ತ ಸುಮ್ಮನಿರಲಾದರೆ. "ಯಾರು ನೀವು? ಬಲುದೂರ ಪ್ರಯಾಣವೋ" ಎಂದು ಧನಿಕನು ಆ ಕಾವಲು ಕುಳಿತವನನ್ನು ಕೇಳಿದನು.

ಕಾವಲು ಕುಳಿತವನು ನಿದ್ರೆಯಲ್ಲಿರುವವರನ್ನು ತೋರಿಸುತ್ತಾ "ದೂರವೂ ಸಮೀಪವೂ ಎಲ್ಲಾ ನಮಗೆ ಒಂದೇ. ಆತನಿಗೆ ತಿಂಡಿಗಾಗಿ ಯಾಚನೆ ಮಾಡಲಿಕ್ಕಾಗುವುದಿಲ್ಲ. ಈ ಎರಡನೆಯವನಿಗೆ ಬೇಕೆಂಬುದನ್ನು ಪಡೆಯಲಾಗದ ಕೊರತೆಯಿಂದ ಬದುಕುವದಾರಿ ಗೊತ್ತಾಗುವುದಿಲ್ಲ. ನಾವು ಮೂವರೂ ಪ್ರಶಾಂತವಾಗಿರೋಣವೆಂದು ಇಲ್ಲಿ ಸೇರಿದ್ದೇವೆ. ಇಟ್ಟುಕೊಳ್ಳಬೇಕೆಂದರೂ ಇಟ್ಟುಕೊಳ್ಳಲಾಗದುದನ್ನು ಸಾಗಿಸಿಕೊಂಡು, ಯಾಚನೆ ಮಾಡುತ್ತಾ, ನಿಲ್ಲೆಂದರೂ ನಿಲ್ಲಲಾಗದುದನ್ನು ಹೇಗೋ ತಳ್ಳಿಕೊಂಡಿದ್ದೇವೆ" ಎಂದನು.

ಅವನು ಹೀಗೆ ಚಮತ್ಕಾರವಾಗಿ ಹೇಳಿದ ಮಾತುಗಳನ್ನು ಕೇಳಿ ಧನಿಕನು ಸಂತೋಷಪಟ್ಟು, ಅವನಿಗೆ ಸ್ವಲ್ಪ ಹಣವನ್ನು ಕೊಟ್ಟು, "ನಾನು ಈ ದೇಶದ ರಾಜರ ಆಪ್ತರಲ್ಲಿ ಒಬ್ಬನು. ನಾಳೆ ನೀವು ರಾಜನ ಸಭೆಗೆ ಬನ್ನಿ. ನಿಮ್ಮಂಥವರು ರಾಜನ ದರ್ಶನ ಮಾಡಿದರೆ ಏನಾದರೂ ಪಾರಿತೋಷಕ ಕೊಡುತ್ತಾರೆ" ಎಂದು ಹೇಳಿ ಸಭಾ ಪ್ರವೇಶಕ್ಕೆ ಒಂದು ಗುರುತಿನ ಪತ್ರವನ್ನೂ ಕೊಟ್ಟನು,

ಮಾರಣೇ ದಿನ ರಾಜನಾದ ಸತ್ಯವಂತನು ಸಭೆ ಸೇರಿಸಿ ಸಿಂಹಾಸನದಲ್ಲಿ ಕುಳಿತು, ಸಭೆಯಲ್ಲಿರು

ಆರ್. ಎಸ್. ನಾರಾಯಣಮೂರ್ತಿ



ವವರನ್ನು ನೋಡಿ, "ನಾನು ಕೆಲವು ಪ್ರಶ್ನೆ ಕೇಳುತ್ತೇನೆ. ಸರಿಯಾದ ಉತ್ತರ ಯಾರಿಗೆ ಗೊತ್ತಿದೆಯೋ ಹೇಳಿರಿ. ತಿಂಡಿ ಯಾಚನೆ ಮಾಡಲು ಆಗದವನು ಯಾರು ? ಮನುಷ್ಯರು ಯಾವಾಗ ಪ್ರಶಾಂತವಾಗಿರುತ್ತಾರೆ ? ಪಡೆಯಬೇಕೆಂದರೂ ಪಡೆಯಲಾಗದುದು ಯಾವುದು ? ಇಟ್ಟುಕೊಳ್ಳ ಬೇಕೆಂದರೂ ಇಟ್ಟುಕೊಳ್ಳಲಾಗದುದು ಏನು ? ನಿಲ್ಲೆಂದರೂ ನಿಲ್ಲದಿರುವುದು ಯಾವುದು ? ಇಷ್ಟೇ ಪ್ರಶ್ನೆಗಳು. ಈ ಪ್ರಶ್ನೆಗಳಿಗೆ ಸಂತೃಪ್ತಿಕರವಾದ ಉತ್ತರ ಹೇಳಿದವರಿಗೆ ತಕ್ಕ ಪಾರಿತೋಷಕವನ್ನು ಕೊಡುತ್ತೇನೆ" ಎಂದನು.

ಸಭೆಯಲ್ಲಿರುವವರೆಲ್ಲಾ ಒಬ್ಬರ ಮುಖ ವನ್ನೊಬ್ಬರು ನೋಡಿದರೇ ಹೊರತು, ಒಬ್ಬರಿಗೂ ಆ ಪ್ರಶ್ನೆಗಳಿಗೆ ಸರಿಯಾದ ಉತ್ತರ ತೋರಲಿಲ್ಲ.

ರಾಜನು ಸ್ವಲ್ಪ ಹೊತ್ತು ತಾಳಿ, "ನಮ್ಮ ಸಭಾಸದರಲ್ಲಿ ಅನೇಕಮಂದಿ ಪಂಡಿತರಿದ್ದಾರೆ. ಅಂಥವರಿಗೆ ಕೂಡಾ ಈ ಪ್ರಶ್ನೆಗಳಿಗೆ ಉತ್ತರ ಹೊಳೆಯದಿರುವುದು ಆಶ್ಚರ್ಯವೇ" ಎಂದನು.

ಆಗ ಒಬ್ಬ ಭಟನು ಸಭೆಯೊಳಗೆ ಬಂದು, "ಪ್ರಭೂ, ಯಾರೋ ಮೂವರು ವ್ಯಕ್ತಿಗಳು ತಮ್ಮ ದರ್ಶನಕ್ಕಾಗಿ ಬಂದಿದ್ದಾರೆ. ನೋಡಲು ಬಹಳ ಬಡವರಂತೆ ಕಾಣುತಿದ್ದಾರೆ. ಅವರ ಹತ್ತಿರ ಈ ಅನುಮತಿಯ ಪತ್ರವಿದೆ. ಅಪ್ಪಣೆಯಾದರೆ ಒಳಗೆ ಕಳುಹಿಸುತ್ತೇನೆ" ಎಂದು ರಾಜನಿಗೆ ಆ ಪತ್ರವನ್ನು ತೋರಿಸಿದನು.

ರಾಜನು ಅವರನ್ನು ಸಭೆಯೊಳಗೆ ಕರೆತರುವಂತೆ ಆಜ್ಞೆ ಮಾಡಿದನು. ಅವರು ಮೂವರೂ ಸಭೆ ಯೊಳಗೆ ಬಂದು, ಭಟನು ತೋರಿಸಿದ ಸ್ಥಾನದಲ್ಲಿ ಕುಳಿತುಕೊಂಡರು. ರಾಜನು ಪ್ರಶ್ನಾರ್ಥಕವಾಗಿ ನೋಡಿದ ಕೂಡಲೇ ಆ ಮೂವರಲ್ಲಿ ಒಬ್ಬನು ಎದ್ದು, "ಮಹಾಪ್ರಭೂ ! ನನ್ನ ಹೆಸರು ವೀರಭದ್ರ. ಪ್ರಭುಗಳಿಗೆ ನನ್ನ ಪಾಂಡಿತ್ಯವು ಯಾವ ರೀತಿಯ ದೆಂಬುದನ್ನು ಪ್ರದರ್ಶಿಸಿ, ಬಹುಮಾನ ಪಡೆಯ ಬೇಕೆಂದು ಮಾಡಿದೆನು. ಈ ವರೆಗೂ ನನಗೆ ಸಭಾ ಪ್ರವೇಶವು ಲಭಿಸದೆ ಹೋಯಿತು. ನನ್ನ ತಂದೆ ಯನ್ನೂ ಅಣ್ಣಂದಿರನ್ನೂ ಕಾಪಾಡುವ ಹೊಣೆ ನನ್ನ ಮೇಲಿದೆ. ತುಂಬಾ ಬಡವರು ನಾವು. ನಮ್ಮ ಅದೃಷ್ಟದಿಂದ ನಿನ್ನೆ ಒಬ್ಬರು ಧನಿಕರು ನಮ್ಮನ್ನು ನೋಡಿ ಸಹಾಯಮಾಡಿ, ಇಲ್ಲಿಯ ಅನುಮತಿ ಪತ್ರ ಕೊಟ್ಟುದರಿಂದ ಇಲ್ಲಿಗೆ ಬರಲು ಸಾಧ್ಯವಾಯಿತು" ಎಂದನು.

ಆಗ ರಾಜನ ಅಂತರಂಗಿಕನಾದ ಪಾರ್ಥಸಾರಥಿ ಆಸನದಿಂದ ಎದ್ದು ನಿಂತು, "ಮಹಾರಾಜರೇ, ನಾನು ಅರಿಕೆಮಾಡಿಕೊಂಡದ್ದು ಇವರ ವಿಷಯವನ್ನೇ" ಎಂದನು. ಅಷ್ಟರಲ್ಲಿ ಸಭೆಯ ತಲೆಬಾಗಿಲಿನಲ್ಲಿ ಏನೋ ಕಲಕಲವೆದ್ದಿತು. ಒಬ್ಬ ವೃದ್ಧನು ರಾಜನ ಸಮೀಪಕ್ಕೆ ಬಂದು, "ಮಹಾರಾಜರೇ, ಇದೇ

ಈಗ ತಾವು ಕೇಳಿದ ಪ್ರಶ್ನೆಗಳಿಗೆ ನನ್ನ ಮೊಮ್ಮಗಳು ಸರಿಯಾದ ಉತ್ತರ ಕೊಡುತ್ತಾಳೆ. ತಾವು ಆ ಹುಡುಗಿಗೆ ಅವಕಾಶ ಕೊಡಬೇಕು" ಎಂದನು.

ಅದನ್ನು ಕೇಳಿ ಸಭೆಯೊಳಗೆ ಮೆಲ್ಲನೆ ನಗುವುದೂ, ಗುಸುಗುಸು ಮಾತಾಡುವುದೂ ಹೊರಟುವು. ವೃದ್ಧನು ಕೋಪದಿಂದ ಸಭೆಯನ್ನೊಮ್ಮೆ ನೋಡಿ, ರಾಜನನ್ನು ಕುರಿತು, "ಮಹಾರಾಜರೇ, ನಮ್ಮ ಆಸ್ಥಾನ ಪಂಡಿತರು ತಮ್ಮ ದೊಡ್ಡತನಕ್ಕೆ ಎಲ್ಲಿ ಹಾನಿಬರುವುದೋ ಎಂದುಕೊಂಡು ಪ್ರತಿಭಾವಂತ ರಾದ ಹೊಸಬರಿಗೆ ತಮ್ಮ ದರ್ಶನವಾಗದಂತೆ ಅಡ್ಡಿಪಡಿಸುತ್ತಿದ್ದಾರೆ. ಆ ಕಾರಣದಿಂದ ತುಂಬಾ ವಿದ್ವಾಂಸಳೂ, ಸಮಯಸ್ಫೂರ್ತಿಯುಳ್ಳವಳೂ ಆದ ನನ್ನ ಮೊಮ್ಮಗಳಿಗೆ ಇಂದಿನವರೆಗೂ ತಮ್ಮ ದರ್ಶನ ಭಾಗ್ಯ ಸಿಕ್ಕದೆ ಹೋಯಿತು" ಎಂದನು.

ರಾಜನು ಒಬ್ಬ ಭಟನನ್ನು ಕರೆದು ಆ ವೃದ್ಧನ ಮೊಮ್ಮಗಳನ್ನು ಸಭೆಗೆ ಕರೆಯಿಸಿದನು. ಅವಳ ಹೆಸರು ಕಾತ್ಯಾಯಿನಿ. ಅವಳ ಮುಖದಲ್ಲಿ ಕಾಣುವ ವರ್ಚಸ್ಸನ್ನೂ, ಹುಮ್ಮಸ್ಸನ್ನೂ ನೋಡಿ ಸಭಿಕರು ಬೆರಗಾದರು.

ರಾಜನು ಕಾತ್ಯಾಯಿನಿಗೆ ತಾನು ಈ ಮೊದಲು ಕೇಳಿದ ಪ್ರಶ್ನೆಗಳನ್ನು ಮತ್ತೊಮ್ಮೆ ಹೇಳಿ ಉತ್ತರ ಗೊತ್ತಿದ್ದರೆ ಹೇಳಲು ಅನುಮತಿ ಕೊಟ್ಟನು. ಕೂಡಲೇ ಕಾತ್ಯಾಯಿನಿ ಸ್ವಲ್ಪ ಕೂಡ ತಡವರಿಸಿಕೊಳ್ಳದೆ, "ಮಹಾರಾಜರೇ, ಕ್ರಮವಾಗಿ ಹೇಳುವ ಉತ್ತರ ಗಳನ್ನು ಕೇಳೋಣಾಗಲಿ. ಮೊದಲನೇ ಪ್ರಶ್ನೆ ತುಂಬ ಸುಲಭವಾದುದು. ತಿಂಡಿಯನ್ನು ಯಾಚನೆ ಮಾಡಲಾಗದವನು ಮೂಕ. ಈ ವಿಷಯವನ್ನು ಸ್ವಲ್ಪ ಮಾತ್ರ ಯೋಚಿಸಿದರೆ ಯಾರಿಗಾದರೂ ತಿಳಿಯುತ್ತದೆ. ನಿದ್ದೆಯ ಸಮಯದಲ್ಲಿ ಮಾತ್ರವೇ ಮನುಷ್ಯರು ಪ್ರಶಾಂತವಾಗಿರುತ್ತಾರೆ. ಪಡೆಯ ಬೇಕೆಂದರೂ ಪಡೆಯಲಾಗದಿರುವಂಥಾದ್ದು ಬುದ್ಧಿವಂತಿಕೆಯ ಜ್ಞಾನ. ಇಟ್ಟುಕೊಳ್ಳಬೇಕೆಂದರೂ ಇಟ್ಟುಕೊಳ್ಳಲಾಗದುದು ಶರೀರ. ನಿಲ್ಲಿಸಲಾಗದುದು ಕಾಲ. ಈ ಸತ್ಯಸಂಗತಿಗಳನ್ನು ಬಡವನಾದ ವೀರಭದ್ರನು, ತಾನು ಮತ್ತು ಮೂಕನಾದ ತನ್ನ ತಂದೆ. ಬುದ್ಧಿಜ್ಞಾನವಿಲ್ಲದ ಅಣ್ಣನೊಂದಿಗೆ ಯಾಚನೆ ಮಾಡುತ್ತಾ ಬದುಕಿನ ಭಾರದಿಂದ ಕುಂಗಿ ಹೋಗುತ್ತಿರುವುದಾಗಿ ಹೇಳಿದ್ದಾನೆ" ಎಂದಳು.

ಈ ಉತ್ತರಗಳನ್ನು ಕೇಳಿ ಪಂಡಿತರೆಲ್ಲಾ ತಲೆ ದೂಗಿದರು. ರಾಜನೂ ಸಭೆಯವರೂ ಹರ್ಷಧ್ವನಿ ಮಾಡಿದರು. ರಾಜನು ವೀರಭದ್ರನನ್ನೂ, ಕಾತ್ಯಾಯಿನಿ ಯನ್ನೂ ತುಂಬಾ ಪ್ರಶಂಶಿಸಿ ಸನ್ಮಾನ ಮಾಡಿ ಸಂತೋಷಪಡಿಸಿ ಕಳುಹಿಸಿದನು.





# ದೊಡ್ಡವರ ಮೋಸ

ಅನೇಕ ನೂರು ವರ್ಷಗಳ ಹಿಂದೆ ಒಂದು ನಗರದಲ್ಲಿ ಒಬ್ಬ ದೊಡ್ಡ ಧನಿಕರು ತಮ್ಮ ಒಳ್ಳೆಯ ಕೆಲಸಗಳಿಂದಲೇ ಧರ್ಮಕರ್ತರೆಂಬ ಹೆಸರು ಪಡೆದಿದ್ದರು. ಅವರಿಗೆ ಅನಾಥರನ್ನು ನೋಡಿದರೆ ತುಂಬಾ ಕರುಣೆ ಒಸರುತಿತ್ತು.

ಆ ನಗರದಲ್ಲಿ ಒಬ್ಬ ಭಿಕ್ಷುಕನಿದ್ದನು. ಅವನು ಬಗೆಬಗೆಯ ವೇಷಗಳನ್ನು ಹಾಕಿಕೊಂಡು ಜನರು ಕೊಡುವ ದಾನಧರ್ಮಗಳಿಂದಲೇ ಹೊಟ್ಟೆ ತುಂಬಿಸಿಕೊಂಡು ತಿರುಗುತ್ತಿದ್ದನು. ಆ ಊರಿನಲ್ಲಿರುವ ಧನಿಕರಾದ ಧರ್ಮಕರ್ತರು ಬಹಳ ದೊಡ್ಡ ಧರ್ಮಾತ್ಮರೆಂದು ಅವನಿಗೆ ಗೊತ್ತಾಯಿತು. ಹೇಗಾದರೂ ಮಾಡಿ ಅವರ ಕೈಯಿಂದ ದೊಡ್ಡ ದಾನವೇನಾದರೂ ಪಡೆದುಕೊಳ್ಳಬೇಕೆಂದು ಆ ಭಿಕ್ಷುಕನಿಗೆ ಆಶೆಯುಂಟಾಯಿತು. ಅದಕ್ಕಾಗಿ ಅವನು ತನ್ನ ಕಾಲಿಗೆ ಯಾವುದೋ ಹಸಿರೆಲೆಯ ರಸವನ್ನು ಹಚ್ಚಿ ಕಾಲುಗಳು ದಪ್ಪವಾಗಿ ಬಾತು ಹೋಗುವ ಹಾಗೆ ಮಾಡಿಕೊಂಡನು. ಸಾಮಾನ್ಯರಾರೂ ಅವನ ಮೋಸವನ್ನು ಕಂಡು ಹಿಡಿಯಲು ಸಾಧ್ಯವಿರಲಿಲ್ಲ. ಅಂತಹ ಕಾಲುಗಳೊಂದಿಗೆ ಆ ಭಿಕ್ಷುಕನು ನೋವನ್ನು ಅನುಭವಿಸುವವನಂತೆ ನರಳುತ್ತ, ಒಂದು ದಿನ ಬೆಳಿಗ್ಗೆ ಧರ್ಮಕರ್ತರ ಮನೆಯ ಮುಂದೆ ಬೀದಿಯ ಬದಿಯಲ್ಲಿ ಕುಳಿತನು. ಧರ್ಮಕರ್ತರ ಮನೆಗೆ ಬಂದು ಹೋಗುವ ಜನರು ಅವನನ್ನು ನೋಡಿ ಕನಿಕರಪಟ್ಟು, ಚಿಲ್ಲರೆದುಡ್ಡು ಅವನ ಮುಂದೆ ಹಾಕುತ್ತಿದ್ದರು. ಆದರೆ ಅವನಿಗೆ ಬೇಕಾದುದು ಧರ್ಮಕರ್ತರ ದಾನವೇ ಹೊರತು ಮಾಮೂಲು ಭಿಕ್ಷೆಯ ಕಾಸುಗಳಲ್ಲ. ಆದುದರಿಂದ ಅವನು ಆ ಸ್ಥಳವನ್ನು ಬಿಟ್ಟು ಕದಲದಿದ್ದನು.

ಸ್ವಲ್ಪ ಹೊತ್ತಿಗೆ ಧರ್ಮಕರ್ತರೇ ಹೊರಗೆ ಬಂದರು. ಅವರನ್ನು ನೋಡಿ ಭಿಕ್ಷುಕನು "ದಯ ಮಾಡಬೇಕು ಸ್ವಾಮಿ! ನೋವಿನಿಂದ ಪ್ರಾಣ ಹೋಗ್ತಾ ಇದೆ ಅಪ್ಪಾ! ನಿಮ್ಪುಣ್ಯದೇವ್ರು!" ಎಂದು ಗಟ್ಟಿಯಾಗಿ ರೋದಿಸಲು ತೊಡಗಿದನು.

ಧರ್ಮಕರ್ತರು ಹತ್ತಿರ ಬಂದು ಅವನ ಕಾಲನ್ನು ನೋಡಿದರು. ಅವರ ಹೃದಯವು ಕರಗಿಹೋಯಿತು. ತಮ್ಮ ಸೇವಕರನ್ನು ಕರೆದು, "ಇವನನ್ನು ಎತ್ತಿಕೊಂಡು ಹೋಗಿ ನನ್ನ ಶಯನಮಂದಿರದಲ್ಲಿ, ನನ್ನ ಮಂಚದ ಮೇಲೆಯೇ ಮಲಗಿಸಿರಿ. ನಾನು ಗಟ್ಟಿಗ

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ

ರಾದ ವೈದ್ಯರನ್ನು ಕರೆದುಕೊಂಡು ಬರುತ್ತೇನೆ. ಅವರಿಗೆ ಬೇಕಾದ ಉಪಚಾರಗಳಿಗೆ ಯಾವ ಕೊರತೆಯೂ ಉಂಟಾಗದಂತೆ ನೋಡಿಕೊಳ್ಳಿರಿ" ಎನ್ನು ಹೇಳಿ ಹೊರಟು ಹೋದರು.

ಧರ್ಮಕರ್ತರ ಸೇವಕರು ಆ ಭಿಕ್ಷುಕನನ್ನು ಎತ್ತಿಕೊಂಡು ಹೋಗಿ, ಅವರು ಮಲಗುವ ಮಂಚವಾದ ಹಂಸತೂಲಿಕಾ ತಲ್ಪದ ಮೇಲೆ ಮಲಗಿಸಿಟ್ಟರು. ಮತ್ತೆ ಸ್ವಲ್ಪ ಹೊತ್ತಿಗೆ ಇಬ್ಬರು ವೈದ್ಯರು ಭಿಕ್ಷುಕನ ಹತ್ತಿರ ಬಂದು, ಅವನ ಕಾಲನ್ನು ಪರೀಕ್ಷಿಸಲು ತೊಡಗಿದರು. ಅವರು ಆ ನಗರದೊಳಗಿನ ಹೆಸರಾಂತ ವೈದ್ಯರಾಗಿದ್ದರು.

ಭಿಕ್ಷುಕನಿಗೆ ಹಣ್ಣಿಗಾಗಿ ಮರಹತ್ತಿದರೆ, ಹಣ್ಣಿನ ಮರವೇ ತನ್ನ ಮೇಲೆ ಬಿದ್ದ ಹಾಗೆ ಆಯಿತು. ತನಗೇಕೆ ಇಂಥ ದುರಾಶೆ ಬಂತೋ ಎಂದು ಮನಸ್ಸಿನಲ್ಲಿ ಪೇಚಾಡ ತೊಡಗಿದನು. ಧರ್ಮಕರ್ತ ಮಹಾಶಯರು ತನ್ನನ್ನು ನೋಡಿ ಏನೋ ದೊಡ್ಡದೊಂದು ಮೊತ್ತವನ್ನು ದಾನಕೊಟ್ಟು ಕಳುಹಿಸಿಬಿಡುವರೆಂದುಕೊಂಡರೆ, ತನ್ನ ಪ್ರಾಣ ಕೊರೆಯಲು ಈ ವೈದ್ಯರು ಬಂದರಲ್ಲಾ!

ಆ ವೈದ್ಯರಲ್ಲೊಬ್ಬನು ಭಿಕ್ಷುಕನ ಕಾಲನ್ನು ನೋಡಿದಕೂಡಲೇ "ಅಬ್ಬಾ! ತುಂಬಾ ಬೆಳೆದು ಹೋಗಿದೆ. ಕಾಲು ಕಡಿಯಲೇ ಬೇಕಾಗುತ್ತೆ!" ಎಂದನು. ಆ ಮಾತು ಕೇಳಿ ಭಿಕ್ಷುಕನ ಎದೆ ನಿಂತು ಹೋದ ಹಾಗಾಯಿತು.

ಎರಡನೇ ವೈದ್ಯನು ಭಿಕ್ಷುಕನ ಕಾಲನ್ನು ಸೂಕ್ಷ್ಮವಾಗಿ ಪರೀಕ್ಷೆ ಮಾಡಿದನು. "ಇದು ಕಳ್ಳಬಾಪು. ಇಂತಹ ಭಿಕ್ಷುಕರು ಕೆಲವು ಹಸಿರೆಲೆಗಳನ್ನು ಜಜ್ಜಿ ಹಿಂಡಿ ಹಚ್ಚಿಕೊಂಡು ಇಂತಹ ರೋಗಗಳನ್ನು ಬೇಕಂತ ಸೃಷ್ಟಿಸಿಕೊಳ್ಳುತ್ತಾರೆ. ಸ್ವಲ್ಪ ಹೊತ್ತಿಗೆಲ್ಲಾ ಈ ಬಾಪು ತನ್ನಂತಾನೇ ಹೋಗಿಬಿಡುತ್ತದೆ. ಇದಕ್ಕೆ ಔಷಧವೇನೂ ಅಗತ್ಯವಿಲ್ಲ" ಎಂದನು.

ಎರಡನೇ ವೈದ್ಯನು ಕೂಡಾ ಪರೀಕ್ಷಿಸಿ ಅದು ನಿಜವಾದ ರೋಗದ ಬಾಪು ಅಲ್ಲವೆಂದು ಕಂಡುಕೊಂಡು ಎರಡನೇ ವೈದ್ಯನ ಅಭಿಪ್ರಾಯಕ್ಕೆ ಬಂದನು.



ಆಗ ಇಬ್ಬರು ವೈದ್ಯರಿಗೂ ಕೋಪ ಬಂದಿತು. "ಚಿಕಿತ್ಸೆ ಮಾಡಿದರೆ ಧರ್ಮಕರ್ತ ದೊರೆಗಳು ನಮಗೆ ತುಂಬಾ ಹಣ ಕೊಡುತ್ತಿದ್ದರು. ಇವನೊಬ್ಬ ಕಳ್ಳಕೊರಮ ! ನಮ್ಮ ಬಾಯಿಗೆ ಬೇವಿನ ಕಾಯಿ ಹಾಕಲು ನೋಡುತ್ತಾನೆ. ನಿಜ ಸಂಗತಿಯನ್ನು ಹೇಳಿ ಬಿಡೋಣ" ಎಂದನು ಒಬ್ಬ ವೈದ್ಯ.

"ಹಾಗೆ ಬೇಡ. ಇವನಿಗೆ ನಿಜವಾಗಿಯೇ ದೊಡ್ಡ ರೋಗವೆಂದು ಹೇಳಿ ಕಾಲನ್ನು ಕಡಿದು ಬಿಡೋಣ. ಹಾಗೆ ಮಾಡಿದರೆ ಹೊರತು ಇವನಿಗೆ ತಕ್ಕ ಶಾಸ್ತಿಯಾಗದು" ಎಂದನು ಎರಡನೇ ವೈದ್ಯ.

ವೈದ್ಯರು ಆಡಿಕೊಳ್ಳುತ್ತಿದ್ದ ಮಾತುಗಳನ್ನು ಕೇಳುತ್ತಿದ್ದಂತೆ ಭಿಕ್ಷುಕನಿಗೆ ಪ್ರಾಣ ಭೀತಿಹಿಡಿಯಿತು. ಅವನು ಗಕ್ಕನೆದ್ದು ಹಾಸಿಗೆಯ ಮೇಲೆ ಕುಳಿತು, "ತಪ್ಪಾಯಿತಯ್ಯಾ ! ಬುದ್ಧಿಕೆಟ್ಟು ನಾಲ್ಕು ಕಾಸು ಹೆಚ್ಚು ಸಿಗುತ್ತೇನೋ ಅಂತ ಆಶೆಪಟ್ಟು, ತಪ್ಪು ಕೆಲಸ ಮಾಡಿದ್ದು ನಿಜವೇ ಅಯ್ಯಾ ! ನನ್ನನ್ನು ಕಾಪಾಡಿರಿ ! ನನ್ನ ಕಾಲು ಕಡಿದು ಗಿಡಿದು ಏನೂ ಮಾಡಬೇಡಿ. ಅದರಿಂದ ನಿಮಗೇನೂ ಲಾಭವಿಲ್ಲ ! ನನ್ನನ್ನು ಕೊಂದ ಪಾಪ ಬಂದೀತು ಸ್ವಾಮಿ ! ನನ್ನನ್ನು ಬಿಟ್ಟುಬಿಡಿ !" ಎಂದುಗೋಳಿಟ್ಟನು.

ವೈದ್ಯರಿಬ್ಬರೂ ಏನೋ ಗುಸುಗುಸು ಮಾತಾಡಿಕೊಂಡರು. "ಈಗ ಮಾತ್ರ ಮುಳುಗಿ ಹೋದುದೇನಿದೆ ? ಇವನ ಕಾಲನ್ನು ನಾವು ಗುಣಮಾಡಿದಂತೆ ನಟಿಸಿ, ನಮಗೆ ಬರುವ ಹಣವನ್ನು ಪಡೆದುಕೊಳ್ಳೋಣ" ಎಂದು ಅವರು ನಿಶ್ಚಯಿಸಿಕೊಂಡರು.

ಅಂತಲೇ ಅವರು ಭಿಕ್ಷುಕನನ್ನು ನೋಡಿ, "ಎಲೋ ! ನೀನು ಬಾಯಿ ಮುಚ್ಚಿಬಿದ್ದುಕೊಂಡಿರಬೇಕು. ಬಾಯಿಯೆತ್ತಿ ಏನಾದರೂ ಹೇಳಿದೆಯೆಂದರೆ ಜಾಗ್ರತೆ ! ನಾವು ಹೇಳುವವರೆಗೂ ಧರ್ಮಕರ್ತರೊಡನೆ ಕಾಲು ನೋವೆಂತಲೇ ಹೇಳಿಕೊಂಡಿರು. ಇಲ್ಲದೇ ಹೋದರೆ ಆ ಕಾಲು ನಿನಗೆ ದಕ್ಕಲಾರದು. ಚೆನ್ನಾಗಿ ನೆನಪಿಟ್ಟುಕೋ !" ಎಂದು ಹೆದರಿಸಿಟ್ಟರು.

ಭಿಕ್ಷುಕನು ಹೊಟ್ಟೆಕಾಟಕ್ಕಾಗಿ ಜನರನ್ನು ಮೋಸಪಡಿಸುವವನೇ ಆದರೂ, ಅವನಿಗೆ ಈ ಹೆಸರಾಂತ



ವೈದ್ಯರ ಮಾತು ಕೇಳಿ ತುಂಬಾ ಆಶ್ಚರ್ಯ ವಾಯಿತು. ಆದರೆ ಅವರಿಗೆ ಇರುವಷ್ಟು ಧೈರ್ಯ ಅವನಿಗೆ ಇಲ್ಲದುದರಿಂದ, ಅವನು ಆ ವೈದ್ಯರು ಹೇಳಿದ ಪ್ರಕಾರವೇ ಸುಮ್ಮನೆ ಬಿದ್ದುಕೊಂಡನು.

ಆ ಘನವೈದ್ಯರು ಧರ್ಮಕರ್ತರೊಂದಿಗೆ "ಸ್ವಾಮಿ, ಈ ದೌರ್ಭಾಗ್ಯದವನು ಕಂಡಕಂಡದ್ದೆಲ್ಲಾ ತಿಂದು ರಕ್ತಕೆಡಿಸಿಕೊಂಡು ಬಹಳ ಅಪಾಯಕರವಾದ ಪರಿಸ್ಥಿತಿಗೆ ಮುಟ್ಟಿದ್ದಾನೆ. ದೇವರ ಅನುಗ್ರಹ ವಿದ್ದುದರಿಂದಲೇ ನಿಮ್ಮ ಕಣ್ಣಿಗೆ ಬೀಳುವಂತಾಯಿತು. ನೀವೇನೋ ನಮ್ಮನ್ನು ಕರೆಯಿಸಿದ್ದೀರಿ. ನಾವು ನಮ್ಮಿಂದಾದಷ್ಟು ಪ್ರಯತ್ನಿಸುತ್ತೇವೆ. ಸಾವಧಾನದಲ್ಲಿ ಗುಣವಾಗುವುದೆಂಬ ನಂಬುಗೆಯಿದೆ. ಮೇಲೆ ದೇವರಿದ್ದಾನೆ !" ಎಂದರು.

ಅವರು ದಿನಾ ಬಂದು ಔಷಧವೆಂದು ಏನೋ ನೀರನ್ನು ಅವನ ಬಾಯಿಗೆ ಸುರಿದು, ಕಾಲಿಗೆ ಥಪ್ಪದ ಕಟ್ಟುಕಟ್ಟಿ ಹೋಗುತ್ತಿದ್ದರು. ಆ ಕೆಲಸಕ್ಕೆ ಇಬ್ಬರು ವೈದ್ಯರು ಬಹಳ ಹೊತ್ತು ತೆಗೆಯುತ್ತಿದ್ದರು. ವಾರಗಳ ಮೇಲೆ ತಿಂಗಳುಗಳೂ ನಡೆದುವು, ಭಿಕ್ಷುಕನಿಗೇನೋ ಎಲ್ಲಾ ವಿಧದಲ್ಲಿಯೂ ಸುಖ ವಾಗಿಯೇ ದಿನಗಳು ಕಳೆಯುತ್ತಿದ್ದುವು. ಆದರೆ ಇದಕ್ಕಿಂತಲೂ ಸ್ವೇಚ್ಛೆಯಾಗಿ ಬೀದಿ ಬೀದಿ ತಿರುಗಿ ಬೇಡಿ ತಿನ್ನುವುದೇ ಅವನಿಗೆ ಒಳ್ಳೆಯದೆನಿಸುತ್ತಿತ್ತು.

ಅವನು ವೈದ್ಯರನ್ನು ನೋಡಿ, "ನನ್ನ ಕಾಲನ್ನು ಬೇಗನೇ ಗುಣಮಾಡಿ ಬಿಡಿರಯ್ಯಾ ! ನಿಮಗೆ ಪುಣ್ಯಬರುತ್ತದೆ" ಎಂದು ಪ್ರಾರ್ಥಿಸತೊಡಗಿದನು.

ಮೂರು ತಿಂಗಳವರೆಗೆ ಕಳ್ಳ ರೋಗಕ್ಕೆ ಕಳ್ಳ ಚಿಕಿತ್ಸೆ ಮಾಡಿದ ವೈದ್ಯರು ಭಿಕ್ಷುಕನ ಗೋಳನ್ನು ತಾಳಲಾಗದೆ, ಕಡೆಗೊಂದುದಿನ ಅವನ ಚಿಕಿತ್ಸೆ ಪೂರ್ತಿಯಾಗಿ ಕಾಲು ಗುಣವಾಯಿತೆಂದು ಧರ್ಮ ಕರ್ತರೊಂದಿಗೆ ಹೇಳಿದರು. ಧರ್ಮಕರ್ತರು, ಸಂತೋಷಪಟ್ಟು ವೈದ್ಯರ ಚಿಕಿತ್ಸಾ ವೇತನ, ಔಷಧ ಖರ್ಚುಗಳನ್ನೂ, ಮೇಲೆ ಬಹುಮಾನಗಳನ್ನೂ ಕೊಟ್ಟರು. ತರುವಾಯ ಧರ್ಮಕರ್ತರು ಆ ಭಿಕ್ಷುಕ ನೊಂದಿಗೆ, "ಏನೋ, ಈಗ ನಿನ್ನ ಕಾಲು ಸರಿಯಾಯಿತಷ್ಟೇ ? ಏನು ಕೆಲಸ ಮಾಡುತ್ತೀ ? ಹೇಗೆ ಜೀವಿಸುತ್ತಿ ?" ಎಂದು ಕೇಳಿದರು.

"ಚೆನ್ನಾಗಿ ಬುದ್ಧಿ ಬಂತು ಸ್ವಾಮಿ ! ಇನ್ನು ಜನ್ಮದಲ್ಲಿ ಭಿಕ್ಷೆಬೇಡಲಾರೆನು. ಅದರ ಹೊರತು ಎಂಥ ಕೆಲಸವಾದರೂ ಮಾಡುತ್ತೇನೆ" ಎಂದನು ಭಿಕ್ಷುಕ. ಅವನು ಆ ಮಾತನ್ನು ಯಾವ ಅರ್ಥದಲ್ಲಿ ಹೇಳಿದನೆಂಬುದು ಧರ್ಮಕರ್ತರಿಗೆ ಅರ್ಥವಾಗ ದಿದ್ದರೂ, ಅವನನ್ನು ತಮ್ಮ ಬಳಿಯಲ್ಲಿಯೇ ಒಂದು ಕೆಲಸವನ್ನು ಕೊಟ್ಟು ಇರಿಸಿಕೊಳ್ಳುವುದಾಗಿ ಹೇಳಿದರು. ಅದನ್ನು ಕೇಳಿ ಭಿಕ್ಷುಕನು ಒಪ್ಪಿದನು.





# ಕಪಟಯೋಗಿ

ಪೂರ್ವಕಾಲದಲ್ಲಿ ಕುರುರಾಜ್ಯದೊಳಗಿನ ಪಾಂಚಾಲ ನಗರಕ್ಕೆ ರೇಣುಕನೆಂಬವನು ಮಹಾರಾಜನಾಗಿದ್ದನು. ಅವನಿಗೆ ಸಾಧುಸಂತರ ಮೇಲೆ ತುಂಬಾ ಶ್ರದ್ಧೆ ಯಿದ್ದಿತು. ಒಂದುಸಾರಿ ಹಿಮಾಲಯ ಪರ್ವತ ಗಳಲ್ಲಿ ಐದುಮಂದಿ ಸಾಧುಗಳಿಗೆ ಗುರುವಾಗಿದ್ದ ಮಹಾರಕ್ಷಿತನೆಂಬತಪಸ್ವಿ, ತನ್ನ ಶಿಷ್ಯರೊಂದಿಗೆ ದೇಶ ಸಂಚಾರಕ್ಕೆ ಹೊರಟನು.

ಅವರು ಪಾಂಚಾಲ ನಗರಕ್ಕೂ ಬಂದರು. ರೇಣುಕ ರಾಜನು ಬಹಳ ಸಂತೋಷಪಟ್ಟು, ಮಹಾರಕ್ಷಿತ ನನ್ನು ಗೌರವದಿಂದ ಸ್ವಾಗತಿಸಿ, ಉಚಿತಮರ್ಯಾದೆ ಗಳನ್ನು ಮಾಡಿ, ಉದ್ಯಾನದೊಳಗೆ ಆ ಸಾಧುಗಳಿಗೆ ವಸತಿ ಸೌಕರ್ಯಗಳನ್ನು ಏರ್ಪಡಿಸಿ ಕೊಟ್ಟನು.

ವರ್ಷರ್ತು ಕಳೆದು ಹೋಗುವವರೆಗೂ ಮಹಾ ರಕ್ಷಿತನು ಅಲ್ಲಿದ್ದು ಆಮೇಲೆ ರಾಜನಿಂದ ಅಪ್ಪಣೆ ಪಡೆದುಕೊಂಡು, ಹಿಂದಿರುಗಿ ಹಿಮಾಲಯಕ್ಕೇ ಹೊರಟನು. ಮಾರ್ಗದಲ್ಲಿ ವಿಶ್ರಾಂತಿ ಪಡೆಯುವಾಗ ರೇಣುಕ ರಾಜನು ತಮಗೆ ಮಾಡಿದ ಸತ್ಕಾರವನ್ನು ಕುರಿತು ಮಾತಾಡ ತೊಡಗಿದರು. ಮಾತಿನ ಸಂದರ್ಭ ದಲ್ಲಿ ಆ ರಾಜನಿಗೆ ಇನ್ನೂ ಸಂತಾನವಿಲ್ಲವೆಂಬ ಸಂಗತಿ ಬಂತು. ಅವನಿಗೆ ಸಂತಾನ ಪ್ರಾಪ್ತಿ ಇದೆಯೋ ಇಲ್ಲವೋ ಎಂಬ ಪ್ರಶ್ನೆ ಎದ್ದಿತು. ಎಲ್ಲವನ್ನೂ ಕೇಳಿದ ಅವರ ಗುರು ಮಹಾರಕ್ಷಿತನು, “ರೇಣುಕ ರಾಜನಿಗೆ ದೈವಾಂಶದ ಕುಮಾರನೊಬ್ಬನು ಹುಟ್ಟುತ್ತಾನೆ. ಇದು ನಿಜ” ಎಂದನು.

ತಮ್ಮ ಗುರುವಾದ ಮಹಾರಕ್ಷಿತನು ವಾಕ್ಸಿದ್ಧಿ ಯುಳ್ಳವನೆಂದು ಶಿಷ್ಯರಿಗೆಲ್ಲಾ ಗೊತ್ತಿತ್ತು. ಆಗ ಅವರೊಳಗಿನ ಒಬ್ಬ ಶಿಷ್ಯನಿಗೆ ಒಂದು ದುರ್ಬುದ್ಧಿ ಹುಟ್ಟಿತು. ಅವನು ಉಳಿದವರನ್ನು ನೋಡಿ, “ನಾನು ಸ್ವಲ್ಪ ಹಿಂದಿನಿಂದ ಬರುತ್ತೇನೆ. ನೀವೆಲ್ಲಾ ಮುಂದೆ ಹೋಗುತ್ತಾ ಇರಿ” ಎಂದು ಹೇಳಿದನು. ಎಲ್ಲರೂ ಮುಂದೆ ಹೋಗಿ ಕಣ್ಮರೆಯಾದ ಕೂಡಲೇ ಅವನು ಹಿಂದಿರುಗಿ ಪಾಂಚಾಲನಗರಕ್ಕೆ ಬಂದನು.

ಅವನು ನೆಟ್ಟಗೆ ರಾಜದರ್ಶನಮಾಡಿ, “ಎಲೈ ರಾಜನೇ, ನಾವೆಲ್ಲಾ ಹಿಮಾಲಯಕ್ಕೆ ಹೋಗುವಾಗ ಒಂದು ಕಡೆಯಲ್ಲಿ ದಣಿವಾರಿಸಿಕೊಳ್ಳಲು ಕುಳಿತೆವು. ಆ ಸಮಯದಲ್ಲಿ ನಿನ್ನನ್ನು ನೆನೆದುಕೊಂಡೆವು. ರಾಜನಿಗೆ ವಂಶವು ಉಳಿಯುವುದೋ ಇಲ್ಲವೋ ಎಂಬ ಪ್ರಶ್ನೆ ಬಂತು. ನಾವು ದಿವ್ಯದೃಷ್ಟಿಯಿಂದ

ನೋಡಿ, ನಿನಗೆ ದೈವಾಂಶ ಸಂಭೂತನಾದ ಕುಮಾರನು ಹುಟ್ಟುವನೆಂದು ತಿಳಿದೆವು. ಈ ವಾರ್ತೆಯನ್ನು ಹೇಳಿ ಹೋಗಲಿಕ್ಕಾಗಿ ಬಂದೆನು. ಇನ್ನು ಹೊರಡುತ್ತೇನೆ" ಎಂದು ಹೊರಡಲು ಎದ್ದನು.

ಈ ಶುಭವಾರ್ತೆ ಕೇಳಿ ಆನಂದಭರಿತನಾದ ರಾಜನು, ಆ ಯೋಗಿಯನ್ನು ನಿಲ್ಲಿಸಿ, "ಮಹಾತ್ಮಾ! ತಾವು ಸಾಮಾನ್ಯದವರಲ್ಲ; ದಿವ್ಯಚಕ್ಷುಗಳು! ಇಲ್ಲೇ ಇದ್ದು ನಮ್ಮ ಸೇವೆ ಸ್ವೀಕರಿಸುವಂತೆ ಕೇಳಿಕೊಳ್ಳುತ್ತೇನೆ" ಎಂದು ಪ್ರಾರ್ಥಿಸಿದನು.

ದುಷ್ಟಬುದ್ಧಿಯ ಯೋಗಿ ರಾಜನ ಪ್ರಾರ್ಥನೆಯನ್ನು ಅಂಗೀಕರಿಸಿಕೊಂಡನು. ಅವನಿಗೆ ರಾಜನು ಉದ್ಯಾನವನದಲ್ಲಿ ಎಲ್ಲಾ ವಸತಿಗಳನ್ನೂ ಏರ್ಪಡಿಸಿಕೊಟ್ಟನು. ಆ ಕಪಟಯೋಗಿಯನ್ನು ಗುರುವಿನಂತೆ ಸೇವಿಸಲಿಕ್ಕೂ ತೊಡಗಿದನು. ಕಪಟಯೋಗಿ ರಾಜನು ಪ್ರವೇಶಿಸದಿರುವ ಉದ್ಯಾನದ ಒಂದು ಮೂಲೆಯಲ್ಲಿ ತರಕಾರಿಗಳನ್ನು ಬೆಳೆಸಿ ಅವುಗಳನ್ನು ತೋಟಮಾಲಿಯ ಮೂಲಕವಾಗಿ ಮಾರಾಟ ಮಾಡಿಸಿ ಧನಗಳಿಸಿ ಅಡಗಿಸಿಟ್ಟುಕೊಳ್ಳತೊಡಗಿದನು. ಈ ಸುದ್ದಿ ಯಾರಿಗಾದರೂ ಹೇಳಿದರೆ ಶಪಿಸುವೆನೆಂದು ತೋಟ ಮಾಲಿಯನ್ನೂ ಕಾವಲುಗಾರರನ್ನೂ ಹೆದರಿಸಿಟ್ಟಿದ್ದನು.

ಮಹಾಗುರುಗಳು ಹೇಳಿದಂತೆ ಬೋಧಿಸತ್ವನು ರೇಣುಕ ಮಹಾರಾಜನಿಗೆ ಕುಮಾರನಾಗಿ ಜನಿಸಿದನು. ಅವನಿಗೆ ಸುಮನಸನೆಂದ ಹೆಸರಿಟ್ಟಿದ್ದರು.

ಸುಮನಸ ಕುಮಾರನಿಗೆ ಏಳನೇ ವಯಸ್ಸು ಬರುತ್ತಿದ್ದಾಗ ರೇಣುಕ ರಾಜನಿಗೆ ಸಾಮಂತ ರಾಜರೊಂದಿಗೆ ಯುದ್ಧಕ್ಕೆ ಹೋಗಬೇಕಾದ ಪ್ರಸಂಗ ಬಂತು. ತಂದೆ ಮನೆಯಲ್ಲಿಲ್ಲದಾಗ ಒಂದು ದಿನ ಸುಮನಸಕುಮಾರನು ಉದ್ಯಾನವನವನ್ನು ಸುತ್ತಿ ನೋಡಲು ಹೋದನು. ಅಲ್ಲಿ ಒಂದು ಮೂಲೆಯಲ್ಲಿ ಕಾಷಾಯ ವಸ್ತ್ರ ಧರಿಸಿದ ಯೋಗಿ ಗಿಡಗಳಿಗೆ ಓಳಿ ಅಗೆಯುತ್ತ, ಪಾತಿ ಮಾಡುತ್ತ ಕೂಲಿಯವನಿಗಿಂತಲೂ ಹೆಚ್ಚಿಗೆ ದುಡಿಯುವುದನ್ನು ನೋಡಿದನು.

ಸುಮನಸನು ಆ ಕಪಟಯೋಗಿಯ ಗುರುತು ಹಿಡಿದು ಅವನಿಗೆ ಬುದ್ಧಿ ಕಲಿಸಬೇಕೆಂದುಕೊಂಡು,



"ಲೋ! ಯೋಗೀ ವೇಷದ ತೋಟಮಾಲೀ!" ಎಂದು ಗಟ್ಟಿಯಾಗಿ ಕೂಗಿದನು.

ದಿವ್ಯ ಚಕ್ಷುಸ್ಸಿನವನೆಂದು ಖ್ಯಾತನಾದ ಕಪಟ ಯೋಗಿ, ಆ ಕರೆಯನ್ನು ಕೇಳಿ ಅದುರಿಬಿದ್ದನು. ತನ್ನ ರಹಸ್ಯವು ರಾಜಕುಮಾರನಿಗೆ ತಿಳಿಯಿತೆಂದು ಅವನಿಗೆ ಗೊತ್ತಾಯಿತು. ಅವನನ್ನು ಹೇಗಾದರೂ ಕೊನೆಗಾಣಿಸಬೇಕೆಂದುಕೊಂಡನು.

ರಾಜನು ವಿಜಯಿಯಾಗಿ ಹಿಂದಿರುಗಿ ಬರುವಾಗ ಮೊದಲು ತನ್ನ ದರ್ಶನಕ್ಕೆ ಬರುವನೆಂದು ಅವನಿಗೆ ಗೊತ್ತು. ಆ ಸಮಯಕ್ಕೆ ಸರಿಯಾಗಿ ಕಪಟ ಯೋಗಿ ತನ್ನ ಕಮಂಡಲುವನ್ನೂ, ಪೀಠವನ್ನೂ ಒಡೆದು ಹಾಕಿದನು. ಆಶ್ರಮದ ಸುತ್ತಲೂ ಕಸ ಕಪ್ಪುಗಳನ್ನು ಚೆಲ್ಲಿಬಿಟ್ಟನು. ತರುವಾಯ ಮೈಗೆ ಪೂರಾ ಎಣ್ಣೆ ಪೂಸಿಕೊಂಡು ಆಶ್ರಮದ ಒಂದು ಮೂಲೆಯಲ್ಲಿ ನೋವಿನಿಂದ ಮೂಲುಗುತ್ತಾ ಬಿದ್ದನು.

ರಾಜನು ತನ್ನ ಗುರುವಾದ ದಿವ್ಯಚಕ್ಷುಸ್ಸಿನ ಯೋಗಿಯನ್ನು ನೋಡಲು ಬಂದನು. ಆಶ್ರಮದ ಪ್ರಾಂತವೆಲ್ಲಾ ಕಸಗಪ್ಪುಗಳಿಂದ ಅಶುಭ್ರವಾಗಿರುವುದನ್ನು ಕಂಡು ಆಶ್ಚರ್ಯವಾಯಿತು. ಒಳಗೆ ಯೋಗಿ ನರಳುತ್ತಿರುವುದನ್ನು ನೋಡಿ ಗಾಬರಿಯಾಗಿ, "ಮಹಾತ್ಮಾ! ಏನು ನಡೆಯಿತು?" ಎಂದು ಭಯಭಕ್ತಿಯಿಂದ ಕೈ ಜೋಡಿಸಿ ಕೇಳಿದನು.

"ಇದೆಲ್ಲಾ ನಿನ್ನ ಮಗನು ಮಾಡಿದ ಕೆಲಸ!" ಎಂದು ಕಪಟಯೋಗಿ ಸಮುನಸಕುಮಾರನ ಪುಂಡತನವನ್ನು ಕುರಿತು ಹೇಳಿ, "ಇಂಥಾ ಮಗನನ್ನು ತಿದ್ದುವುದು ಕಷ್ಟ! ಮುಂದೆ ರಾಜನಾಗಿ ಪ್ರಜೆಗಳನ್ನು ಉಳಿಯಗೊಳಿಸುವನೇ?" ಎಂದನು.

ಅದನ್ನು ಕೇಳಿ ರಾಜನು ಅತ್ಯುಗ್ರನಾಗಿ ತಳವಾರರನ್ನು ಕರೆಯಿಸಿ, "ಸುಮನಸನ ತಲೆ ಕಡಿದು ನನ್ನ ಬಳಿಗೆ ತನ್ನಿ" ಎಂದು ಕ್ರೂರವಾಗಿ ಆಜ್ಞೆ ಮಾಡಿದನು.

ತಾಯಿಯ ಬಳಿಯಲ್ಲಿ ಕುಳಿತುಕೊಂಡಿದ್ದ ಸುಮನಸನನ್ನು ನೋಡಿ ತಳವಾರರು ರಾಜನ ಆಜ್ಞೆಯನ್ನು ಅವನಿಗೆ ತಿಳಿಸಿದರು. ಕೂಡಲೇ ಸುಮನಸನು ತಂದೆಯ ಬಳಿಗೆ ಬಂದು. "ಅಪ್ಪಾ, ನೀವು ಮಹಾತ್ಮನೆಂದು



ಪೂಜಿಸುವ ಆ ಕಪಟ ಯೋಗಿ ತೋಟದಲ್ಲಿ ಏನು ಕೆಲಸ ಮಾಡುವನೆಂದು ಕಾವಲುಗಾರರನ್ನೂ, ತೋಟದ ಮಾಲಿಯನ್ನೂ ಕೇಳಿ ನೋಡಿರಿ. ಆಗ ನಿಜ ಸಂಗತಿ ತಿಳಿಯುತ್ತದೆ" ಎಂದನು.

ರಾಜನು ಉದ್ಯಾನದ ನಾಲ್ಕು ಬಾಗಿಲಿನ ಕಾವಲು ಗಾರರನ್ನೂ ತೋಟದ ಮಾಲಿಯನ್ನೂ ಕರೆಯಿಸಿದನು. ಅವರು ಏನೂ ಮುಚ್ಚುಮರೆ ಮಾಡದೆ ಯೋಗಿ ತರಕಾರಿಗಳನ್ನು ಮಾರಿ ಹಣ ಮಾಡುವುದನ್ನೂ, ಅದರಿಂದ ಗುಟ್ಟಾಗಿ ಭೋಗಗಳನ್ನು ಅನುಭವಿಸುವುದನ್ನೂ ಹೇಳಿದರು. ಆಶ್ರಮದಲ್ಲಿ ಹುಡುಕಿಸುವಾಗ ಅಡಗಿಸಿಟ್ಟ ಧನವೂ ಇತರ ಭೋಗ ವಸ್ತುಗಳೂ ದೊರೆತುವು. ರಾಜನು ತನ್ನ ತಪ್ಪಿಗೆ ಬಹಳ ದುಃಖಿಸುತ್ತ ಮಗನೊಂದಿಗೆ, "ಕಂದಾ, ನನ್ನ ದುಡುಕುತನವನ್ನು ಮನ್ನಿಸು. ನೀನು ಚಿಕ್ಕವನಾದರೂ ನನಗಿಂತ ಮೇಲಾದವನು. ಇನ್ನು ಮೇಲೆ ಈ ರಾಜ್ಯವನ್ನು ಕೂಡಾ ನೀನೇ ಆಳು" ಎಂದನು.

ಸುಮನಸನು ಅದಕ್ಕೆ ಒಪ್ಪದೆ, "ಬೇಡ. ಮಹಿಮೆಯ ಮೂಲಿಕೆಯೊಂದು ಎಂತಹ ಪ್ರಭಾವ ಬೀರುವುದೋ, ಜಾರಿ ಬಿದ್ದ ಮಾತು ಕೂಡಾ ಅಷ್ಟೇ ಪ್ರಭಾವ ಬೀರುತ್ತದೆ. ನಿಮ್ಮ ಬಾಯಿಯಿಂದ ಹೊರಟದ್ದು ದುಷ್ಟ ವಾಕ್ಯಗಳು. ತಾಯಿಯ ಹತ್ತಿರ ಕುಳಿತಿದ್ದ ಬಾಲನಾದ ನನ್ನನ್ನು ನಿಮ್ಮ ತಳವಾರರು ವಧ್ಯ ಶಿಲೆಯ ಬಳಿಗೆ ಕರೆದೊಯ್ಯಲು ನೋಡಿದರು. ಹುಡುಗನಾದ ನನ್ನ ಮೇಲೆ ರಾಜ್ಯಭಾರ ಹಾಕಲು ನೋಡುವುದೂ ಸಹ ದುಡುಕು ಬುದ್ಧಿಯೇ! ನಾನು ಈಗಲೇ ನಿಮ್ಮ ರಾಜ್ಯವನ್ನು ಬಿಟ್ಟೇ ಹೊರಟು ಹೋಗುತ್ತೇನೆ" ಎಂದನು.

ಸುಮನಸ ಕುಮಾರನ ಮನಸ್ಸನ್ನು ಸಮಾಧಾನಪಡಿಸುವಂತೆ ರಾಜನು ರಾಣಿಯನ್ನು ಕೇಳಿಕೊಂಡನು. ಆದರೆ ಧರ್ಮ ಚಿಂತನೆಯುಳ್ಳ ರಾಣಿ, ಕಪಟತನಕ್ಕೆ ಬಲಿ ಬೀಳುವ ರಾಜನಿಂದ ಮಗನಿಗೆ ಆಪತ್ತು ಬಂದೀತೆಂದು ಅಂಜಿ ಮಗನನ್ನು ಆಶೀರ್ವದಿಸುತ್ತ, "ಕಂದಾ! ನೀನು ಧರ್ಮಮೂರ್ತಿ! ಪವಿತ್ರವೂ, ಪ್ರಶಾಂತವೂ ಆದ ಜೀವನದೊಂದಿಗೆ ಎಲ್ಲಿಯಾದರೂ ಸುಖವಾಗಿರು" ಎಂದಳು.

ಸುಮನಸನು ಹಿಮಾಲಯವನ್ನು ಸೇರಿ, ಅಲ್ಲಿ ವಿಶ್ವಕರ್ಮನು ನಿರ್ಮಿಸಿದ ಕುಟೀರದಲ್ಲಿ ತಪಸ್ಸು ಮಾಡುತ್ತಾ ಕಾಲಕಳೆದನು.

ರೇಣುಕ ರಾಜನು ಕಪಟ ಯೋಗಿಗೆ ಮರಣ ದಂಡನೆ ವಿಧಿಸಿದನು. ಅಂದಿನಿಂದ ರಾಜ್ಯದಲ್ಲಿ ಯೋಗಿಗಳಿಗೆ ಯಾರೂ ಆಶ್ರಯ ಕೊಡಬಾರದೆಂದು ಶಾಸನವನ್ನೇ ಮಾಡಿದನು. ದುಷ್ಟಬುದ್ಧಿಯಾದ ಒಬ್ಬ ಕಪಟಯೋಗಿಯ ಕಾರಣದಿಂದ, ಯೋಗಿಗಳಿಗೆಲ್ಲಾ ಕುರುರಾಜ್ಯದಲ್ಲಿ ಅಪಕೀರ್ತಿಯುಂಟಾಯಿತು.






# ಶಿಲಾದಿತ್ಯ

ಒಂದು ಮಹಾ ಸಾಮ್ರಾಜ್ಯವನ್ನು ಸ್ಥಾಪಿಸ ಬೇಕೆಂಬ ಮಹತ್ವಾಕಾಂಕ್ಷೆಯುಳ್ಳ ಶಿಲಾದಿತ್ಯನು, ೭ ನೆಯ ಶತಮಾನದಲ್ಲಿ ಕಾಶ್ಮೀರವನ್ನು ಪಾಲಿಸಿ ಕೊಂಡಿದ್ದನು. ಯುದ್ಧಪ್ರಿಯನಾದ ಅವನು ಗೋಬೀ ಮರುಭೂಮಿಯ ಆಚೆಗಿರುವ ಒಂದು ಚಿಕ್ಕ ರಾಜ್ಯವನ್ನು ಜಯಿಸಬೇಕೆಂದು ಸೈನ್ಯದೊಂದಿಗೆ ಹೊರಟನು.

ದಾರಿಯಲ್ಲಿ ಒಂದು ಕಡೆ ಹೊಸಬನೊಬ್ಬನು ಓಡುತ್ತಾ ಬಂದು ಶಿಲಾದಿತ್ಯನು ಏರಿಕೊಂಡಿದ್ದ ಕುದುರೆಯ ಮುಂದೆ ಸಾಷ್ಟಾಂಗವಾಗಿ ಬಿದ್ದನು. ರಾಜನು ಕುದುರೆಯನ್ನು ನಿಲ್ಲಿಸಿ ವಿಚಾರಿಸಲು, ಆ ಹೊಸಬನು, ಶಿಲಾದಿತ್ಯನು ದಾಳಿಮಾಡ ಲಿರುವ ರಾಜ್ಯದ ಮಂತ್ರಿಯೆಂದು ಗೊತ್ತಾಯಿತು. ಚಾರರೂ ಅವನನ್ನು ಗುರುತಿಸಿದರು.





ಅವನು ತಾನು ಬಂದ ಕಾರಣವನ್ನು ಹೇಳಿದನು. ಆ ಮಂತ್ರಿ ತನ್ನ ರಾಜನಿಗೆ ಮಹಾ ಬಲಿಷ್ಠನಾದ ಶಿಲಾದಿತ್ಯನಿಗೆ ಶರಣಾಗಿಬಿಡುವುದೇ ಒಳ್ಳೆಯ ದೆಂದು ಸಲಹೆ ಮಾಡಿದನಂತೆ. ಆದರೆ ರಾಜನು ಶಿಲಾದಿತ್ಯನನ್ನು ದೂಷಿಸಿ ಅವನನ್ನು ಕೊರಡೆ ಗಳಿಂದ ಹೊಡೆಯಿಸಿದನಂತೆ. ಅವನ ಶರೀರದಲ್ಲಿ ಗಾಯಗಳೂ ಇದ್ದುವು.



ಹೀಗೆ ಶರಣಾದ ಮಂತ್ರಿಗೆ ಆ ರಾಜನು ಮಾಡಿದ ಅವಮಾನಕ್ಕೆ ತಕ್ಕ ಪ್ರತೀಕಾರ ಮಾಡಿತೀರುವೆನೆಂದು ಶಿಲಾದಿತ್ಯನು ಭರವಸೆಕೊಟ್ಟನು. ಆಗ ಮಂತ್ರಿ "ಮಹಾಪ್ರಭೂ, ನೀವು ಸೈನ್ಯದೊಂದಿಗೆ ಮಾಮೂಲು ದಾರಿಯಲ್ಲಿ ಸಾಗಿದರೆ ನಮ್ಮ ರಾಜ್ಯ ಸೇರಲು ಮೂರು ತಿಂಗಳುಬೇಕು. ಮರುಭೂಮಿಯಲ್ಲೊಂದು ಸಮಿಪದ ದಾರಿ ನನಗೆ ಗೊತ್ತು. ಹಾಗೆ ಹೋದರೆ ನಮ್ಮ ರಾಜ್ಯವನ್ನು ಎರಡುವಾರಗಳೊಳಗೆ ಸೇರಬಹುದು" ಎಂದನು.

ಶಿಲಾದಿತ್ಯನು ಈ ಹತ್ತಿರದ ಹಾದಿಯಲ್ಲಿ ಪ್ರಯಾಣ ಮಾಡಲು ನಿಶ್ಚಯಿಸಿದನು. ಮರುಭೂಮಿಯಲ್ಲಿ ನೀರು ಸಿಗಲಾರದು. ಆ ಮಂತ್ರಿ ಸಲಹೆ ಮಾಡಿದಂತೆ ಸೇನೆಗೆ ಎರಡು ವಾರಗಳ ವರೆಗೆ ಸಾಕಾಗುವಷ್ಟು ನೀರನ್ನು ಸಂಗ್ರಹಿಸಿಕೊಂಡನು. ಆ ಮಂತ್ರಿ ಮುಂದಾಗಿ ದಾರಿ ತೋರಿಸಿದಂತೆ ಸೈನ್ಯವು ಮರುಭೂಮಿಯಲ್ಲಿ ಪ್ರವೇಶಿಸಿತು.





ಮರುಳುಗಾಡಿನಲ್ಲಿ ಪ್ರಯಾಣ ಮಾಡುವುದು ಅತ್ಯಂತ ಬಾಧಾಕರವಾಗಿತ್ತು. ಎಲ್ಲಿಯೂ ಸಣ್ಣ ನೆರಳು ನೀಡುವ ಮರವೂ ಇಲ್ಲ. ಅಂತೂ ಆಯಾಸದಿಂದ ಹದಿನೈದು ದಿನಗಳು ಕ್ರಮಿಸಿದುವು. ಆ ಸಮಯಕ್ಕೆ ತಂದುಕೊಂಡಿದ್ದ ನೀರು ಪೂರಾ ಮುಗಿಯಿತು. ಕೆಲವು ಕುದುರೆಗಳೂ ಆನೆಗಳೂ ಸತ್ತು ಬಿದ್ದುವು.



ಮಂತ್ರಿ ಮಾತ್ರ ಸೇರಬೇಕಾದ ಪ್ರದೇಶ ಇನ್ನೇನು ಬಂತು, ಸಮೀಪವೇ ಇದೆ ಎಂದು ಧೈರ್ಯ ಹೇಳುತ್ತಲೇ ಇದ್ದನು. ಆದರೆ ಎಲ್ಲಿಯೂ ಜನನಿವಾಸದ ಸೂಚನೆಯೇ ಕಾಣಲಿಲ್ಲ. ಕ್ರಮವಾಗಿ ಬಿಸಿಲಿನ ತಾಪದಿಂದ ಸೈನಿಕರೂ ಸಾಯತೊಡಗಿದರು. ದಳಪತಿಗಳು ರಾಜನೊಂದಿಗೆ ಈ ಮರುಭೂಮಿಯ ಪ್ರಯಾಣವು ಎಲ್ಲರ ಸಾವಿಗೂ ಕಾರಣವಾಗುತ್ತದೆಂದು ಹೇಳಿದರು.

ಮಂತ್ರಿಯ ಮಾತಿಗೆ ಬೇಸತ್ತು ಹೋದ ಶಿಲಾದಿತ್ಯನು "ನಾವಿನ್ನು ಯಾವಾಗ ನಿಮ್ಮ ರಾಜ್ಯ ತಲಪುತ್ತೇವೆ ? ನಿಜ ಹೇಳು" ಎಂದು ಜೋರಿನಿಂದ ಕೇಳಿದನು. ಆಗ ಮಂತ್ರಿ "ಇನ್ನು ಬೇಗದಲ್ಲೇ ಸೈನ್ಯದೊಂದಿಗೆ ನೀವು ಮೃತ್ಯುಲೋಕಕ್ಕೇ ಹೋಗುವಿರಿ. ಬೇಕಾದರೆ ನನಗೆ ಮರಣದಂಡನೆ ವಿಧಿಸಿರಿ. ಇನ್ನು ಮೇಲೆ ಈ ಮರುಭೂಮಿಯಲ್ಲಿ ಮುಂದೆ ಹೋದರೂ ಹಿಂದೆ ಹೋದರೂ ನಮಗೆಲ್ಲಾ ಸಾವು ಮಾತ್ರ ತಪ್ಪದು" ಎಂದನು.





ಅವನು ರಾಜನೊಂದಿಗೆ ತಾನು ಬೇಕೆಂತಲೇ ನೀರು ಸಿಗದ ಮರಳು ಗಾಡಿನಲ್ಲಿ ಸಾಗಿಸಿಕೊಂಡು ಬಂದೆನೆಂಬುದನ್ನು ಒಪ್ಪಿಕೊಂಡನು. ತಮ್ಮ ಚಿಕ್ಕ ರಾಜ್ಯವನ್ನು ಕಾಪಾಡಲಿಕ್ಕಾಗಿ ಅವನು ಆತ್ಮಾರ್ಪಣೆ ಮಾಡಿಕೊಳ್ಳಲು ಸಿದ್ಧನಾದನಂತೆ. ಶಿಲಾದಿತ್ಯನನ್ನು ನಂಬಿಸಲು ತನ್ನ ಮಿತ್ರರಿಂದ ಕೊರಡೇ ಛಡಿಗಳನ್ನು ತಿಂದನಂತೆ. ಇದನ್ನೆಲ್ಲ ಹೇಳಿ "ಮಹಾರಾಜರೇ ! ನನ್ನ ತಲೆಕಡಿಸಿಬಿಡಿ" ಎಂದು ಮುಂಡುಗಾಲೂರಿ ತಲೆವಾಗಿದನು ಆ ಮಂತ್ರಿ.



ಶಿಲಾದಿತ್ಯನು ಕೈ ಕಾಲುಗೆಡದೆ ನೀರನ್ನು ಹುಡುಕುವಂತೆ ಸೈನಿಕರಿಗೆ ಆಜ್ಞೆಮಾಡಿದನು. ಅವನೊಂದಿಗೆ ಭಪ್ಪ ಜಲನೇತ್ರನೂ ಇದ್ದನು. ಅವನು ತೋರಿಸಿದ ಪ್ರದೇಶದಲ್ಲಿ ಸೈನಿಕರು ಅಗೆಯ ತೊಡಗಿದರು. ಎಷ್ಟು ಅಗೆದರೂ ನೀರು ಬರಲಿಲ್ಲ.

ನಿರಾಶನಾಗದ ರಾಜನ ಆಜ್ಞೆಯಂತ ಸೈನಿಕರು ಮತ್ತೂ ಮತ್ತೂ ಆಳಕ್ಕೆ ಅಗೆದರು. ಹಠಾತ್ತಾಗಿ ನೀರಿನ ಬುಗ್ಗೆ ಹೊರ ಚಿಮ್ಮಿತು. ಸೈನಿಕರಿಗಾದ ಆನಂದೋತ್ಸಾಹ ಅಷ್ಟಿಷ್ಟಲ್ಲ. ಶಿಲಾದಿತ್ಯನು ಹಿಂದಿರುಗುವ ಪ್ರಯಾಣಕ್ಕೆ ಬೇಕಾದಷ್ಟು ನೀರನ್ನು ದೊಡ್ಡ ದೊಡ್ಡ ಪಾತ್ರೆಗಳಲ್ಲಿ ಸಂಗ್ರಹ ಮಾಡಿಸಿದನು.





ತರುವಾಯ ಅವನು ಆ ಮಂತ್ರಿಯೊಂದಿಗೆ, "ಈ ಮರುಭೂಮಿಯಲ್ಲಿ ದಾಹದಿಂದ ಒಣಗಿ ನಾವು ಸಾಯುವಾಗ ನೀನೂ ನಮ್ಮೊಂದಿಗೆ ಸಾಯುವವನಾದುದರಿಂದ ನಾನು ನಿನ್ನನ್ನು ಕೊಲ್ಲಲಿಲ್ಲ. ಆದರೆ ಈಗ ಪ್ರಕೃತಿ ನನ್ನ ಮೇಲೆ ದಯೆದೋರಿತು. ಆ ಕಾರಣದಿಂದ ನಾನೂ ನಿನ್ನ ಮೇಲೆ ದಯೆ ತೋರಿಸುತ್ತೇನೆ. ನಿನ್ನ ದೇಶ ಭಕ್ತಿ ಮೆಚ್ಚುವಂಥಾದ್ದು !" ಎಂದನು.

# ಆಪದ್ಬಾಂಧವ

ಪಟ್ಟಣದಲ್ಲಿ ಚಿಲ್ಲರೆ ಅಂಗಡಿ ಇಟ್ಟುಕೊಂಡಿದ್ದ ಶೇಷಯ್ಯ, ಅಲ್ಲಿಯ ಕೆಲಸ ಮುಗಿಸಿ ತನ್ನ ಜೋಡೆತ್ತಿನ ಗಾಡಿಯಲ್ಲಿ ತನ್ನ ಹಳ್ಳಿಗೆ ಹೊರಟನು. ಬೀದಿ ಏರು ತಗ್ಗುಗಳೇನಿಲ್ಲದೆ ಚೆನ್ನಾಗಿದ್ದಿತು. ಯಾವ ನಡುಗಾಟ ಇಲ್ಲದೆ ಸರಾಗವಾಗಿ ಸಾಗುತ್ತಿದ್ದ ಗಾಡಿ ಅಕಸ್ಮಾತ್ತಾಗಿ ಒಂದು ಕಡೆ ಕೆಸರಲ್ಲಿ ಚಕ್ರಗಳು ಹೂತು ನಿಂತು ಬಿಟ್ಟಿತು.

ಗಾಡಿಯ ತುಂಬಾ ಮನೆಗೆ ಬೇಕಾದ ಸಮಾನುಗಳಿದ್ದುದರಿಂದ ಶೇಷಯ್ಯ ಎಷ್ಟು ಪ್ರಯತ್ನಿಸಿದರೂ ಗಾಡಿ ಮೇಲಕ್ಕೆ ಕದಲಲಿಲ್ಲ. ಸಮೀಪದಲ್ಲೊಂದು ಗುಡಿಸಲಿದ್ದಿತು.

ಶೇಷಯ್ಯ ಅಲ್ಲಿಗೆ ಹೋಗಿ ಆ ಗುಡಿಸಲಿನವನಹತ್ತಿರ ಗಾಡಿಯ ಸಂಗತಿಯನ್ನು ಹೇಳಿ ಸಹಾಯ ಮಾಡಬೇಕೆಂದು ಕೇಳಿಕೊಂಡನು.

ಗುಡಿಸಲಿನವನು ಹತ್ತು ವಯಸ್ಸಿನ ಹುಡುಗನೊಂದಿಗೆ ಬೀದಿಗೆ ಬಂದು ನಿಮಿಷಮಾತ್ರದಲ್ಲಿ ಗಾಡಿಯ ಚಕ್ರಗಳನ್ನು ಕೆಸರಿನಿಂದ ಮೇಲೆತ್ತಿ ಹೊರಗೆ ತಂದು ನಿಲ್ಲಿಸಿ, ಕೈ ಕೈ ಹೊಸೆದು ಕೊಳ್ಳುತ್ತಾ ನಿಂತನು.

ಶೇಷಯ್ಯ ಬಹಳ ಕೃತಜ್ಞತೆಯಿಂದ ಅವನ ಕೈಗೆ ಒಂದು ವರಹವನ್ನಿಟ್ಟು, "ಈ ವಿಧವಾಗಿ ರಾತ್ರೀ ಹಗಲೂ ನೀನು ತುಂಬಾ ಸಂಪಾದಿಸುವಂತಾಗಲಿ!" ಎಂದನು.

"ಅಪ್ಪನಿಗೆ ರಾತ್ರಿಯಲ್ಲಿ ಬಿಡುವಿರುವುದಿಲ್ಲ ಸ್ವಾಮಿ. ರಾತ್ರಿ ಪೂರಾ ಕೆರೆಯಿಂದ ನೀರು ತಂದು ಈ ಬೀದಿಯನ್ನು ಕೆಸರಾಗಿ ಮಾಡಬೇಕಷ್ಟೇ?" ಎಂದನು ಗುಡಿಸಲಿನ ಮಗ. ಗುಡಿಸಲಿನವನು ಕೋಪದಿಂದ ಮಗನನ್ನು ನೋಡುತ್ತಿರಲು, ಶೇಷಯ್ಯ ಸ್ತಂಭಿಸಿ ನಿಂತನು!





# ಉಪಾಯದಮಾತು

ಅನೇಕ ವರ್ಷಗಳ ಹಿಂದೆ ಪುಷ್ಪಗಿರಿ ಮತ್ತು ಚಂದ್ರಗಿರಿ ಎಂಬ ರಾಜ್ಯಗಳು ನೆರೆಹೊರೆಯ ರಾಜ್ಯಗಳಾಗಿದ್ದುವು. ಆ ಎರಡು ರಾಜ್ಯಗಳ ನಡುವೆಯೂ ಒಳ್ಳೆಯ ಸ್ನೇಹವಿದ್ದಿತು. ಅದರಂತೆ ಪ್ರಜೆಗಳೂ ಯಾವ ತಂಟೆ ತಕರಾರುಗಳಿಲ್ಲದೆ ಒಳ್ಳೆಯ ರೀತಿಯಲ್ಲಿದ್ದರು. ಎರಡು ರಾಜ್ಯದ ಪ್ರಜೆಗಳೊಳಗೂ ಒಳ್ಳೆಯ ಸಂಬಂಧಗಳೂ ಇದ್ದುವು.

ಒಂದು ದಿನ ಪುಷ್ಪಗಿರಿ ರಾಜನಾದ ಜಯಕೇತು ಚಂದನಗಿರಿಯ ರಾಜನಾದ ಸಿಂಹಕೇತುವನ್ನು ತನ್ನ ರಾಜ್ಯಕ್ಕೆ ಆಹ್ವಾನಿಸಬೇಕಾದ ಸಂದರ್ಭ ಬಂದಿತು. ಆ ಪ್ರಾಂತದ ಒಂದು ಪುಣ್ಯಕ್ಷೇತ್ರದಲ್ಲಿ ಆ ಇಬ್ಬರು ರಾಜರೂ ಕಲೆತುಕೊಂಡಾಗ ಮಾತಿಗೆ ಮಾತಾಗಿ ತನ್ನ ರಾಜ್ಯವನ್ನು ಸಂದರ್ಶಿಸಬೇಕೆಂದು ಜಯಕೇತು ಕೇಳಿಕೊಳ್ಳಲು, ಸಿಂಹಕೇತು ಒಪ್ಪಿದ್ದನು.

ಪುಷ್ಪಗಿರಿಯಲ್ಲಿ ಸಿಂಹಕೇತುವಿಗೆ ಗೌರವದ ಅತಿಥಿ ಮರ್ಯಾದೆಗಳೆಲ್ಲ ನಡೆದುವು. ಮೂರು ದಿನಗಳವರೆಗೆ ಸಿಂಹಕೇತು ಪುಷ್ಪಗಿರಿಯಲ್ಲಿದ್ದನು. ನೋಡಬೇಕಾದ ವಿಶೇಷಗಳನ್ನು ನೋಡಿದನು. ಮೂರನೇ ದಿನ ಮಧ್ಯಾಹ್ನ ಭೋಜನಾನಂತರ ವಿನೋದವಾಗಿ ಹೊತ್ತು ಕಳೆಯಲು ಜಯಕೇತು, ಸಿಂಹಕೇತು ರಾಜರು ಚದುರಂಗದ ಆಟಕ್ಕೆ ಕುಳಿತರು. ಸಂತೋಷದಲ್ಲಿ ಆಟ ಪ್ರಾರಂಭವಾಯಿತು.

ಎಷ್ಟು ಆಟಗಳಾಡಿದರೂ ಒಂದುಸಾರಿ ಕೂಡಾ ಸಿಂಹಕೇತುವಿನಿಂದ ಗೆಲ್ಲಲಿಕ್ಕೆ ಆಗಲಿಲ್ಲ. ಇದು ಅವನ ಮನಸ್ಸಿಗೆ ತುಂಬಾ ಅವಮಾನದ ಘಾಸಿಯನ್ನುಂಟು ಮಾಡಿತು. ಸಹಜವಾಗಿಯೇ ಸಿಂಹಕೇತು ಅಹಂಭಾವದ ಸ್ವಭಾವದವನು. ಚಿಕ್ಕಸೋಲನ್ನು ಕೂಡಾ ಸಹಿಸಲಾಗದವನು. ಬಹಳ ಕಾಲದವರೆಗೆ ಸೋಲಿನ ಬಿಸಿಯನ್ನು ತಣಿಸಲಾಗದೇ ಬೇಯುವಂತಹ ವಿಚಿತ್ರ ಮನಸ್ತತ್ವ ಅವನದು. ಕೇವಲ ಆಟದಲ್ಲಿ ಸೋತನೋವು ಅವನ ಹೃದಯದೊಳಗೆ ಅಡಗಿಕೊಂಡೇ ಇತ್ತು.

ಸಿಂಹಕೇತು ಮತ್ತೆ ತನ್ನ ರಾಜ್ಯಕ್ಕೆ ಹೊರಟು ಹೋದಮೇಲೆ, ಸುಮ್ಮನಿರದೆ ಒಂದು ವಾರದೊಳಗೇ ದೊಡ್ಡ ಸೈನ್ಯದೊಂದಿಗೆ ಪುಷ್ಪಗಿರಿಯ ಮೇಲೆ ದಂಡಯಾತ್ರೆ ಮಾಡಿ ಸುಲಭದಲ್ಲೇಗೆದ್ದೂ ಬಿಟ್ಟನು. ವಿಜಯ ಸಾಧಿಸಿಕೊಂಡ ಮೇಲೆಯೇ ಅವನ ಆ ಸೋಲಿನಹಗೆ ತಣಿಯಿತು.

ಜಿ. ಶಿವಕುಮಾರ್

ಪುಷ್ಪಗಿರಿ ಚಂದನಗಿರಿ ರಾಜ್ಯಗಳ ಇನ್ನೊಂದು ಬದಿಯಲ್ಲಿ ಕನಕಗಿರಿಯೆಂಬ ರಾಜ್ಯವಿದ್ದಿತು. ವಿಜಯ ವಲ್ಲಭನೆಂಬ ರಾಜನು ಅದನ್ನು ಆಳಿಕೊಂಡಿದ್ದನು. ಅವನ ಒಬ್ಬಳೇ ಒಬ್ಬಳು ಮಗಳಾದ ಮಣಿವಲ್ಲಭಿ ಸಾಟಿಯಿಲ್ಲದ ಸುಂದರಿ ಎಂದು ಹೆಸರು ಪಡೆದಿದ್ದಳು. ಎಲ್ಲಾ ರಾಜಕುಮಾರರಿಗೂ ಅವಳ ಮೇಲೆ ಕಣ್ಣಿತ್ತು.

ಅವಳಿಗೆ ವಿವಾಹಕ್ಕೆ ತಕ್ಕ ವಯಸ್ಸು ಬಂದುದರಿಂದ ವಿಜಯವಲ್ಲಭರಾಜನು ಅವಳಿಗೆ ಸ್ವಯಂವರ ಮಾಡ ಬೇಕೆಂದು ನಿಶ್ಚಯಿಸಿ ಅದಕ್ಕೆ ತಕ್ಕ ಏರ್ಪಾಡುಗಳಿಗೆ ಪ್ರಾರಂಭಿಸಿದನು. ಆಹ್ವಾನ ಕಳುಹಿಸಬೇಕಾದ ರಾಜರ ಪಟ್ಟಿತಯಾರಾಗಲು ತೊಡಗಿತು. ಆಗ ವಿಜಯ ವಲ್ಲಭನಿಗೆ ದೊಡ್ಡದೊಂದು ಸಮಸ್ಯೆ ಇದಿರಾಯಿತು. ಚಂದನಗಿರಿಯ ರಾಜ ಸಿಂಹಕೇತುವಿಗೆ ಆಹ್ವಾನ ಕಳುಹಿಸುವುದೋ ಬಿಡುವುದೋ ಎಂಬುದೇ ಆ ಸಮಸ್ಯೆ. ಕಳುಹಿಸಿದರೆ ಅವನು ಸ್ವಯಂವರಕ್ಕೆ ಬರುತ್ತಾನೆ. ಸ್ವಯಂವರದಲ್ಲಿ ಕುಮಾರಿ ಇನ್ನೊಬ್ಬ ನನ್ನು ವರಿಸಿಕೊಂಡರೆ, ಆಟದ ಸೋಲನ್ನೂ ಸಹಿಸಲಾಗದ ಅವನು ಈ ಸೋಲನ್ನು ಸಹಿಸಲಾರನು. ಏನಾದರೂ ಜಗಳ ಕೆದರುವನು. ಹಾಗೆಂದು ಆಹ್ವಾನ ಕಳುಹಿಸದೇ ಹೋದರೆ ತನ್ನನ್ನು ನಿರ್ಲಕ್ಷ್ಯ ಮಾಡಿದೆವೆಂದು ಕೋಪಿಸಿಕೊಳ್ಳುತ್ತಾನೆ. ಆಗಲೂ ಅವನಿಂದ ಅಪಾಯವೇ. ಏನೂ ತೋರದೆ ರಾಜನು ತಲೆಯ ಮೇಲೆ ಕೈಯಿಟ್ಟು ಕುಳಿತನು.

ಹೀಗೆ ರಾಜನು ಚಿಂತಿಸುವುದನ್ನು ಗಮನಿಸಿದ ಮಂತ್ರಿ ಚಿಂತೆಯ ಕಾರಣವನ್ನು ಕೇಳಿ ತಿಳಿದನು. ಮಂತ್ರಿ ಸ್ವಲ್ಪ ಹೊತ್ತು ಆಲೋಚನೆ ಮಾಡಿದ ಮೇಲೆ ರಾಜನೊಂದಿಗೆ, "ಈ ವಿಷಯವಾಗಿ ನೀವೇನೂ ಚಿಂತಿಸಬೇಕಾಗಿಲ್ಲ. ಅವನಿಗೂ ಆಹ್ವಾನ ಹೋಗಲಿ. ಎಲ್ಲವೂ ಸಕ್ರಮವಾಗಿ ತೊಂದರೆಯಿಲ್ಲದೆ ನಡೆಯುವಂತೆ ನಾನು ನೋಡಿಕೊಳ್ಳುತ್ತೇನೆ" ಎಂದು ಧೈರ್ಯ ಹೇಳಿದನು.



ಅದರಂತೆ ಎಲ್ಲಾ ರಾಜರಿಗೂ ಆಹ್ವಾನ ಗಳು ಹೋದುವು. ಸ್ವಯಂವರದ ದಿನಕ್ಕೆ ಸರಿಯಾಗಿ ಎಲ್ಲಾ ರಾಜರೂ ಚಿತ್ತೈಸಿದರು. ಸಿಂಹಕೇತು ಕೂಡಾ ಬಂದು ಸಭೆಯಲ್ಲಿ ಕುಳಿತುಕೊಂಡನು. ಅವನ ಹಿಂದೆ ಅವನ ಸೈನ್ಯವೂ ಬಂದಿತ್ತು!

ರಾಜಕುಮಾರಿ ಮಣಿವಲ್ಲಭಿ ವರಮಾಲೆಯೊಂದಿಗೆ ಮುಂದೆ ಮುಂದೆ ಬಂದು ಸಿಂಹಕೇತುವಿನ ಮುಂದಿನಿಂದಾಗಿ ಹೋಗಿ ರತ್ನಗಿರಿಯ ಯುವರಾಜನಾದ ಚಂದ್ರಾಂಗನ ಕೊರಳಿಗೆ ವರಮಾಲೆ ಹಾಕಿದಳು.

ಕೂಡಲೇ ಸಭೆಯವರೆಲ್ಲಾ ಹರ್ಷಧ್ವಾನ ಮಾಡಿದರು. ಸಿಂಹಕೇತುವಿನ ಮುಖದಲ್ಲಿ ಬಣ್ಣ ಬದಲಾವಣೆಯಾಗ ತೊಡಗಿತು. ಆಗ ಮಂತ್ರಿ ಎದ್ದು ಸಭಿಕರನ್ನು ನೋಡಿ, "ಅಹೋ, ಘನಶಾಲಿಗಳಾದ ಮಹಾರಾಜರುಗಳೇ! ನೀವೆಲ್ಲಾ ನಮ್ಮ ಆಹ್ವಾನದಂತೆ ಸ್ವಯಂವರಕ್ಕೆ ಬಂದು ಸಹಾಯ ಮಾಡಿದುದಕ್ಕೆ ಕೃತಜ್ಞತೆಗಳು. ಹೆಚ್ಚಾಗಿ ಸ್ವಯಂವರಗಳೆಂದರೆ

ಗಲಾಟೆಗಳು ಏಳುವುದು ಸಹಜವೇ. ಆಹ್ವಾನಿಸಲ್ಪಟ್ಟವರು ಅಧಿಕ ಸಂಖ್ಯೆಯಲ್ಲಿರುತ್ತಾರೆ. ಕುಮಾರಿ ವರಿಸಬೇಕಾದುದು ಒಬ್ಬನನ್ನೇ. ಆಗ ಉಳಿದವರಿಗೆ ನಿರಾಶೆಯಾಗುವುದೂ ಸಹಜ. ಆ ನಿರಾಶೆಯನ್ನು ಉಳಿದವರು ಸಹೃದಯತೆಯಿಂದ ಸಹಿಸಿಕೊಳ್ಳಬೇಕು. ಅಂಥ ಸಹೃದಯತೆಗೆ ಎದೆಗುಂಡಿಗೆ ಗಟ್ಟಿಯಾಗಿರಬೇಕು. ಸಡಿಲೆದೆಯವರೇ ಸಹನೆಯ ಶಕ್ತಿಯಿಲ್ಲದೆ ಕದನಕ್ಕೇಳುವರು.

"ಪುಣ್ಯವಶಾತ್ ಇಲ್ಲಿ ಯಾರೂ ಅಂಥವರಿಲ್ಲ. ನೀವೆಲ್ಲರೂ ವೀರಧೀರ ಪರಾಕ್ರಮಿಗಳಾದುದರಿಂದಲೇ ಗಂಭೀರರಾಗಿರುವಿರಿ. ಏನಾದರೂ ಗಲಾಟೆಯಾಗುವುದೇನೋ ಎಂಬ ಭಯವೂ ನಮಗಿತ್ತು. ನಮ್ಮ ಮಿತ್ರದೇಶದ ಚಂದನಗಿರಿಯ ಮಹಾರಾಜ ಸಿಂಹಕೇತು ಅವರಿಗೆ ಕೂಡಾ ಅದೇ ಅನುಮಾನವಿದ್ದಿರಬೇಕು. ಅಂತಹುದೇನಾದರೂ ಬಂದರೆ ನಮಗೆ ಸಹಾಯ ಮಾಡುವ ಸನ್ನದ್ಧತೆಯೊಂದಿಗೇ ಅವರೂ ಬಂದಿದ್ದಾರೆ. ಅವರು ನಮಗಿಂತ ನಾಲ್ಕೈದು ಪಾಲು ದೊಡ್ಡ ಭೂಭಾಗಕ್ಕೆ ಒಡೆಯರಾದುದರಿಂದ ನಮ್ಮಂಥ ಸಣ್ಣ ರಾಜರೊಂದಿಗೆ ಸಂಬಂಧ ಬೆಳೆಸಲು ಬಂದಿರಲಾರರು. ಕುಮಾರಿ ಹತ್ತಿರ ಬರುವಾಗ ಅವರು ತಲೆಯಾಡಿಸಿದುದರಿಂದ ಅವಳು ಮುಂದೆ ಸಾಗಿದಳು, ಅದರಿಂದ ಅವರು ನಮಗೆ ಸಹಾಯವಾಗಿ ನಿಂತು ಸ್ವಯಂವರವನ್ನು ನಿರ್ವಿಘ್ನವಾಗಿ ನಡೆಯಿಸಿಕೊಡಲಿಕ್ಕೇ ಬಂದಿರುವರೆಂದು ಅರ್ಥವಾಗಿ, ಅವರಿಗೆ ಪ್ರತ್ಯೇಕವಾದ ಕೃತಜ್ಞತೆ ಸಮರ್ಪಿಸುತ್ತೇವೆ" ಎಂದು ತನ್ನ ಪ್ರಸಂಗವನ್ನು ಮುಗಿಸಿದನು. ಮಂತ್ರಿಯ ಮಾತು ಪೂರ್ತಿಯಾಗುತ್ತಲೇ ಸಭೆಯವರೆಲ್ಲಾ "ಸಿಂಹಕೇತು ಮಹಾರಾಜರಿಗೆ ಜಯಜಯಾ!" ಎಂದು ಘೋಷಮಾಡಿದರು. ಆಗ ಸಿಂಹಕೇತುವಿಗೆ ಏನೋ ತಬ್ಬಿಬ್ಬಾದಂತೆನಿಸಿತು. ರಾಜಕುಮಾರಿಯ ಮುಂದೆ ತಾನೆಲ್ಲಿ ತಲೆಯಾಡಿಸಿದೆ? ತಾನು ಮಂತ್ರಿ ಹೇಳಿದ ಮಾತಿಗೆ ವಿರೋಧ ವ್ಯಕ್ತಪಡಿಸಿದರೆ, ತಾನು ರಾಜಕುಮಾರಿಯಿಂದ ತಿರಸ್ಕೃತನಾದೆನೆಂದು ಸ್ಪಷ್ಟಪಡಿಸಿದ ಹಾಗಾಗುತ್ತದೆ. ಸುಮ್ಮನಿದ್ದರೆ ಎಲ್ಲರ ಮೆಚ್ಚುಗೆಯಾದರೂ ಉಳಿಯುತ್ತದೆ, ದರ್ಪಕ್ಕೂ ಕಡಿಮೆಯಾಗದು.

ಅಂತಲೇ ಅವನು ಎಲ್ಲರ ಜಯಜಯಾಕಾರವನ್ನು ಸ್ವೀಕರಿಸಿಕೊಂಡವನ ಹಾಗೆ ಜೋರಾಗಿ ಕುಳಿತುಕೊಂಡನು. ಆಮೇಲೆ ವಿಜಯವಲ್ಲಭನಿಂದ ವಿಶೇಷ ಮರ್ಯಾದೆ ಪಡೆದು ದರ್ಪ ಗಂಭೀರತೆಯಿಂದಲೇ ತನ್ನ ನಗರಕ್ಕೆ ಹಿಂದಿರುಗಿದನು.

ಅವನ ಅಪಾಯವನ್ನು ಮಾತಿನ ಉಪಾಯದಿಂದಲೇ ತೀರಿಸಿದ ಮಂತ್ರಿಯನ್ನು ವಿಜಯವಲ್ಲಭನು ತುಂಬಾ ಪ್ರಶಂಸಿಸಿದನು.



# ತನ್ನಂಥವನೇ!

ಉಪ್ಪಂಗಿ ಗ್ರಾಮದಲ್ಲಿ ತುಂಬಾ ಧನವಂತನಾದ ದೊಡ್ಡ ಜಿಪುಣನೊಬ್ಬ, ಅಣ್ಣಂಗಿ ಗ್ರಾಮದಲ್ಲಿರುವ ತನ್ನ ಬಂಧುವಿನ ಮನೆಯ ಮದುವೆಗೆ ಹೋಗಲೇ ಬೇಕಾಗಿ ಬಂತು. ಈ ಎರಡು ಗ್ರಾಮುಗಳ ನಡುವಿನ ದೂರ ಹನ್ನೆರಡು ಮೈಲುಗಳು.

ಬಾಡಿಗೆಗೆ ಬೇಕಾದಷ್ಟು ಗಾಡಿಗಳಿದ್ದರೂ, ಹಣ ಉಳಿಯುತ್ತದೆಂದುಕೊಂಡು ಜಿಪುಣನು ಕಾಲು ನಡಿಗೆಯಲ್ಲೇ ಪ್ರಯಾಣ ಹೊರಟಿದ್ದನು.

ದಾರಿಯಲ್ಲಿ ಅವನಿಗೆ ಮತ್ತೊಬ್ಬನು ಗಂಟುಬಿದ್ದು ಮಾತಾಡುತ್ತ "ಇಷ್ಟೊಂದು ಬಿಸಿಲಿನಲ್ಲಿ ನಡೆಯುವುದು ಕಷ್ಟವಲ್ಲವೇ ? ಒಂದು ಗಾಡಿ ಮಾಡಿಕೊಳ್ಳುತ್ತಿದ್ದರೆ ಒಳ್ಳೇದಿತ್ತು" ಎಂದನು.

"ಕಷ್ಟವೇನೋ ಹೌದು. ಹಣ ಕೊಡಬೇಡವೇನು ? ಎಲ್ಲಕ್ಕಿಂತಲೂ ಹಣ ಉಳಿಸಿಕೊಳ್ಳುವುದೇ ಮುಖ್ಯ ವೆಂಬುದನ್ನು ನೋಡಬೇಕು" ಎಂದನು ಜಿಪುಣ.

"ಅದು ನಿಜವೇ. ನನಗೆ ಒಂದು ಕಾಸು ಖರ್ಚು ಮಾಡುವುದೆಂದರೆ ಪ್ರಾಣವೇ ಪಟಪಟ ಅನ್ನುತ್ತೆ" ಎಂದು ಹೊಸಬನು, ಸೊಂಟದೊಳಗಿನಿಂದ ಕತ್ತಿಯನ್ನು ತೆಗೆದು ಎತ್ತಿ. "ನಾಲ್ಕು ದಿನಗಳ ಕೆಳಗೆ ಸಣ್ಣದೊಂದು ಮಾತಿನಿಂದ ಆಗಿಹೋಗುವ ಕೆಲಸಕ್ಕೆ ನಿಮ್ಮಂಥವರ ಮೇಲೆ ಇದನ್ನು ಪ್ರಯೋಗಿಸಿಬಿಟ್ಟೆ. ಮತ್ತೆ ಸಾಣೆ ಹಿಡಿಸಲು ಒಂದು ಪಾವಲಿ ಖರ್ಚಾಯಿತು. ಎಲ್ಲಿ? ನಿಮ್ಮ ಹಣವನ್ನೂ ಬೆರಳಲ್ಲಿದ್ದ ಉಂಗುರವನ್ನೂ ತೆಗೆದುಕೊಡಿ ಬೇಗ." ಎಂದನು.

ಈ ಕಳ್ಳ ತನ್ನಂತಹ ಉಳಿತಾಯದ ಬುದ್ಧಿಯವನೇ ಎಂದುಕೊಂಡು ಜಿಪುಣನು ಮರು ಮಾತಾಡದೆ ಹಣವನ್ನೂ ಉಂಗುರವನ್ನೂ ಅವನಿಗೆ ಕೊಟ್ಟನು.





# ದಯವುಳ್ಳ ದೆವ್ವಗಳು

ಒಂದು ಊರಿನಲ್ಲಿ ಶೌರಿ ಎಂಬವನಿದ್ದನು. ಒಂದು ದಿನ ಏನೋ ಕೆಲಸಕ್ಕೆ ಪಟ್ಟಣಕ್ಕೆ ಹೋದ ಶೌರಿ ಸಾಯಂಕಾಲದೊಳಗೆ ಕೆಲಸವನ್ನು ಮುಗಿಸಿಕೊಂಡು, ಬೇಗಬೇಗನೆ ಊರಿಗೆ ಹಿಂದಿರಿಗಿದನು. ಇನ್ನೂ ಸ್ವಲ್ಪ ಬೇಗ ನಡೆದರೆ ಮಧ್ಯರಾತ್ರಿಯಾಗುವುದರೊಳಗೆ ಮನೆಗೆ ಮುಟ್ಟಬಹುದೆಂದು ಅವನ ಆಶೆ. ಆದರೆ ದಾರಿಯಲ್ಲೊಂದು ಕಾಡನ್ನು ದಾಟಬೇಕಾಗಿತ್ತು. ಅವನು ಅಲ್ಲಿಗೆ ಬರುವಾಗಲೇ ಜೋರಾಗಿ ಮಳೆಸುರಿಯಲು ಪ್ರಾರಂಭವಾಯಿತು. ಅಲ್ಲೆಲ್ಲಿಯೂ ತಲೆಮರೆಸುವ ಜಾಗುಕಾಣದೆ, ಮಳೆ ತಗ್ಗುವವರೆಗೂ ಒಂದು ಮರದ ಕೆಳಗೆ ನಡುಗುತ್ತಾ ನಿಂತನು. ಸ್ವಲ್ಪ ಹೊತ್ತಿಗೆ ಮಳೆ ಸ್ವಲ್ಪ ತಗ್ಗಿದಮೇಲೆ ಮತ್ತೆ ನಡೆಯಲು ತೊಡಗಿದನು.

ಆದರೆ ಅರ್ಧರಾತ್ರಿಯ ಹೊತ್ತಿಗೆ ಅರ್ಧಕಾಡು ಮಾತ್ರವೇ ಕಳೆದಿತ್ತು.

ಚಳಿ ವಿಪರೀತವಾಗಿತ್ತು. ದೂರದಲ್ಲಿ ಕರಡಿಗಳ ಕೂಗುಗಳೂ, ನರಿಗಳ ಊಳೂ ಕೇಳತೊಡಗಿದುವು. ಮುಂದೆ ನಡೆಯುವುದು ಒಳ್ಳೆಯದಲ್ಲವೆನಿಸಿತು. ಇನ್ನು ಬೆಳಗಾಗುವ ವರೆಗೆ ಭದ್ರವಾದ ಜಾಗನೋಡಿ ಮುದುಡಿಕೊಳ್ಳುವುದೇ ಒಳ್ಳೆಯದೆಂದು ತೋರಿತು ಶೌರಿಗೆ. ಅದಕ್ಕೂ ತಕ್ಕ ಜಾಗ ಬೇಕಲ್ಲ ?

ಅದೃಷ್ಟವಶಾತ್ತಾಗಿ ದಾರಿಗೆ ಸ್ವಲ್ಪ ದೂರದಲ್ಲಿ ಭಾರಿಯಾದೊಂದು ಮರವು ಶೌರಿಯ ಕಣ್ಣಿಗೆಬಿತ್ತು. ಆ ಮರದಕಾಂಡದಲ್ಲಿ ಒಬ್ಬ ಮನುಷ್ಯನು ಹಿಡಿಸುವಂತಹ ದೊಡ್ಡ ಪೊಟರೆಯೂ ಇದ್ದಿತು. ಅದರೊಳಗೆ ಬೆಚ್ಚಗಿತ್ತು. ಶೌರಿ ಅದರೊಳಗೆ ತೂರಿ ಮುದುಡಿ ಕುಳಿತನು. ನಡೆದೂ ಓಡಿಯೂ ತುಂಬಾ ದಣಿದವನಾದುದರಿಂದ ಸ್ವಲ್ಪ ಹೊತ್ತಿಗೆ ಅವನಿಗೆ ತೂಕಡಿಕೆ ಶುರುವಾಗಿ ನಿದ್ದೆಹತ್ತಿತು.

ಇದ್ದಕ್ಕಿದ್ದ ಹಾಗೆ ಬೆಚ್ಚಿಬಿದ್ದು ಅವನು ಎಚ್ಚರಕ್ಕೆ ಬಂದಾಗ ತಲೆಯ ಮೇಲೆ ಏನೋ ಗಲಗಲನೆ ಬೀಳುತ್ತಿದ್ದುವು. ಮೂರು ದೆವ್ವಗಳು. ಬೊಗಸೆಗಳಲ್ಲಿ ನಾಣ್ಯಗಳನ್ನು ಆ ಪೊಟರೆಯೊಳಗೆ ಹಾಕುತ್ತಿದ್ದುವು. ಪೊಟರೆಯೊಳಗಿನಿಂದ ತಲೆಯನ್ನು ಹೊರಗೆ ಚಾಚಿ ನೋಡಿದ ಶೌರಿ, ಅಲ್ಲಿರುವ ವಿಕಾರಾಕಾರದ ಪಿಶಾಚಿಗಳನ್ನು ನೋಡಿ ಕಿಟ್ಟನೆ ಕಿರಿಚಿದನು.

"ಹೆದರ ಬೇಡ್ವೋ ಮನುಷ್ಯಾ ! ನಮ್ಮನ್ನು ನೋಡಿದ ಕೂಡಲೇ ಹಾಗೇಕೆ ಕೂಗುತ್ತೀ ?

ಎಂ. ಕೆ. ಈಶ್ವರರಾವ್

ಮನುಷ್ಯರಿಗೆ ಇದೊಂದು ಕೆಟ್ಟ ಅಭ್ಯಾಸವಾಗಿ ಹೋಯ್ತು !" ಎಂದಿತು ಒಂದು ಉದ್ದನ್ನ ದೆವ್ವ.

ಶೌರಿ ನಡುಗುವ ಕಂಠದಿಂದ "ದೆವ್ವಗಳು !" ಎಂದು ಶಬ್ದ ಹೊರಡಿಸಿದನು.

"ಹೌದು. ನಾವು ದೆವ್ವಗಳೇ ! ಯಾವ ದೆವ್ವವೋ ಒಮ್ಮೆ ಹೆದರಿಸಿದ್ದರೆ, ಎಲ್ಲಾ ದೆವ್ವಗಳೂ ಹಾಗೇ ಇರುತ್ತವೆಂದುಕೊಂಡಿಯಾ ? ದಯವುಳ್ಳ ದೆವ್ವಗಳೂ ಇರುತ್ತವೆ. ನಾವು ಆ ಗುಂಪಿನ ದೆವ್ವಗಳು ! ಕೆಡುಕು ಜಾತಿಯ ದೆವ್ವಗಳಲ್ಲಿ ನಾವು" ಎಂದಿತು ಇನ್ನೊಂದು ದೆವ್ವ.

"ಹಾಗೆ ನೋಡಿದರೆ ಈ ಕಾಲದ ಮನುಷ್ಯರು ದೆವ್ವಗಳಿಗಿಂತ ಕಡಿಮೆಯವರೇನಲ್ಲ. ಹಾಗಿದ್ದರೂ ದೆವ್ವಗಳು ಮಾತ್ರ ಕೆಟ್ಟವೆಂದೂ ಏನೋ, ಕೊಂಪೆ ಮುಳುಗಿಸುವಂಥವೆಂದೂ ಒಂದು ದುರಭಿಪ್ರಾಯ ಇದೆ ಮನುಷ್ಯರಿಗೆ. ಅದನ್ನು ಹೋಗಲಾಡಿಸಿ ಮನುಷ್ಯರೊಂದಿಗೆ ಸ್ನೇಹವಾಗಿರಬೇಕೆಂಬುದೇ ನಮ್ಮ ಆಸೆ. ನೀನಾದರೂ ನಮ್ಮನ್ನು ನಂಬಿ ನೋಡಯ್ಯ !" ಎಂದಿತು ಮತ್ತೊಂದು ದೆವ್ವ.

"ಹೌದೌದು. ಅದಕ್ಕೇ ಈ ಪೊಟರೆವೊಳಗೆ ಹಣ ಸುರಿಯುತ್ತೇವೆ, ಮನುಷ್ಯರಿಗೆ ಹಣಾ ಅಂದರೆ ಮಹಾ ಆಶೆಯಲ್ಲವೇ ? ನೀನು ಒಳ್ಳೇ ಸಮಯದಲ್ಲಿ ಬಂದಿದ್ದೀಯಾ ! ಈ ಹಣವನ್ನೆಲ್ಲಾ ಒಯ್ದು ನಿನ್ನ ಊರವರಿಗೆಲ್ಲಾ ಹಂಚಿ ಕೊಟ್ಟು ಅವರೊಂದಿಗೆ ನಮ್ಮ ಸ್ನೇಹ ಆಗುವ ಹಾಗೆ ಮಾಡು. ಮಾಡುವೆಯಷ್ಟೆ ? ಹಣ ನೋಡಿದರೆ ಮನುಷ್ಯರೆಲ್ಲಾ ಹೇಳಿದ ಹಾಗೆ ಕೇಳುವರಷ್ಟೆ ?" ಎಂದಿತು ಒಂದು ದೆವ್ವ,

ಮೂಕನಂತೆ ಅವು ಹೇಳುವುದನ್ನು ಕೇಳುತ್ತಾ ತಲೆ ಯಾಡಿಸುವ ಶೌರಿಯನ್ನು ನೋಡಿ, "ದಯ ಮಾಡಿ ಅಷ್ಟು ಮಾಡಿ ಬಿಡಯ್ಯಾ ಮನುಷ್ಯಾ ! ಇರುವ ಹಣವನ್ನು ಒಯ್ದು ಎಲ್ಲರಿಗೂ ಹಂಚಿ ಬಿಡು. ನಮ್ಮ ವಿಷಯ ಎಲ್ಲರಿಗೂ ಹೇಳು" ಎಂದು ಮೂರು



ದೆವ್ವಗಳೂ ಒತ್ತಾಯಿಸಿ ಹೇಳ ತೊಡಗಿದುವು. ಈಗ ಶೌರಿ ಧೈರ್ಯಗೊಂಡು, "ಹ, ಹ ! ಮಾಡುತ್ತೇನೆ. ನೀವು ಒಳ್ಳೇ ದೆವ್ವಗಳು. ದೆವ್ವಗಳ ಹೆಸರು ಕೇಳಿದರೆ ಸಾಕು, ಮಕ್ಕಳು ಹೆದರುತ್ತವೆ. ಅವರಿಗೆಲ್ಲ ಈ ಹಣವನ್ನು ನಿಮ್ಮಿಂದ ಬಹುಮಾನ ವಾಗಿ ಬಂದಿತೆಂದು ಹೇಳಿ ದೆವ್ವಗಳ ಮೇಲೆ ಅವರಿ ಗೆಲ್ಲ ಭಯ ಹೋಗುವ ಹಾಗೆ ಮಾಡುತ್ತೇನೆ. ನೀವು ಹೇಳಿದ್ದೆಲ್ಲಾ ನಿಜ. ಎಲ್ಲರೂ ನಂಬುತ್ತಾರೆ" ಎಂದು ಹೇಳಿ ಆ ಹಣವನ್ನೆಲ್ಲಾ ಗಂಟುಕಟ್ಟಿಕೊಂಡನು.

"ಅಷ್ಟೊಂದು ಉಪಕಾರ ಮಾಡಯ್ಯ ನಮಗಾಗಿ. ನಾಳೆ ರಾತ್ರಿ ಮತ್ತೆ ಇಲ್ಲಿಗೆ ಬಂದು ಒಳ್ಳೇ ಸಮಾಚಾರ ಹೇಳು. ನಿನ್ನ ದಾರಿ ಕಾಯುತ್ತಿರುತ್ತೇವೆ" ಎಂದು ಹೇಳಿ ದೆವ್ವಗಳು ಅದೃಶ್ಯವಾದುವು.

ಅಷ್ಟು ಹೊತ್ತಿಗೆ ಉಷಃಕಾಲವಾಗುತ್ತಿದ್ದಿತು. ಶೌರಿ ಆತ್ಯಾನಂದದಿಂದ ಹಣದ ಮೂಟೆ ಹೊತ್ತುಕೊಂಡು ಮನೆಗೆ ಬಂದು ಸೇರಿದನು. ನಡೆದೂ ನಿದ್ದೆ ಗೆಟ್ಟೂ



ದಣದವನಿಗೆ ಹಣದ ಮೂಟೆ ಬಲು ಹಗುರಾಗಿ ತೋರಿತು. ದಣವೆಲ್ಲಾ ಮರೆತೇ ಹೋಯಿತು.

" ಪಟ್ಟಣದ ಕೆಲಸ ಮುಗಿಯಿತೇ ? ಪುನಃ ಹೋಗ ಬೇಕೆ ? ಅದೇನು ಹೆಗಲ ಮೇಲೆ ಆ ಮೂಟೆ ? ಏನನ್ನು ತಂದಿರಪ್ಪಾ ?" ಎಂದು ಶೌರಿಯ ಹೆಂಡತಿ ಭಾಗ್ಯಳು ಗಂಡನನ್ನು ನೋಡಿ ಆತುರದಿಂದಲೂ ಆಶೆಯಿಂದಲೂ ಕೇಳಿದಳು.

" ಭಾಗ್ಯದ ಮೂಟೆ ಕಣೇ, ಸೌಭಾಗ್ಯದ ಮೂಟೆ! ನಾವಿನ್ನು ಪಟ್ಟಣದಲ್ಲೇ ಕುಟುಂಬ ಹೂಡಿಬಿಡೋಣ. ನಮ್ಮ ಕತ್ತಲೆ ಹೋಯಿತು, ಹಾಳು ಹಳ್ಳಿಯ ಕತ್ತಲೆ ! ಬಡತನದ ಕತ್ತಲೆ ! ಕಷ್ಟ, ನಷ್ಟ ಎಲ್ಲಾ ಮಾಯ !" ಎಂದನು ಶೌರಿ.

ಆ ಹಣವನ್ನೂ, ಅದು ಸಿಕ್ಕಿದ ರೀತಿಯನ್ನೂ ಕೇಳಿ ಭಾಗ್ಯಳು, " ಇಷ್ಟೇನಾ ನಿಮ್ಮ ಬುದ್ಧಿ ! ಇಷ್ಟು ಸ್ವಲ್ಪ ಹಣದಲ್ಲಿ ಪಟ್ಟಣದಲ್ಲಿ ಒಂದು ಹೊತ್ತು ನಡೆದೀತಾ? ಹೇಗೂ ದೆವ್ವಗಳು ಮತ್ತೆ ಬರಲು ಹೇಳಿದ್ದಾವೆ. ಅವು ಒಳ್ಳೇ ದೆವ್ವಗಳು. ಹೋಗಿ ಇನ್ನಿಷ್ಟು ಹಣ ತೆಗೆದುಕೊಂಡು ಬನ್ನಿ " ಎಂದು ಅದಕ್ಕೊಂದು ದಾರಿಯನ್ನೂ ಅವಳೇ ತಿಳಿಸಿದಳು.

ಮರುದಿನ ರಾತ್ರಿ ಅದೇ ಮರದ ಹತ್ತಿರ ದೆವ್ವ ಗಳು ಶೌರಿಯನ್ನು ಇದಿರುನೋಡುತ್ತಾ ಕಾದಿದ್ದುವು. ಅವನನ್ನು ನೋಡಿದ ಕೂಡಲೇ ಅವು ಆತುರದಿಂದ, " ನಮ್ಮ ಹಣ ತೆಗೆದುಕೊಂಡ ಜನರು ಏನು ಹೇಳಿದರು ? ನಮ್ಮನ್ನು ನೋಡಲು ಇಷ್ಟ ಪಡುತ್ತಾರೆಯೆ " ಎಂದು ಕೇಳಿದುವು,

" ತುಂಬಾ ಸಂತೋಷ ಪಟ್ಟರು. ದೆವ್ವಣ್ಣಗಳನ್ನು ತೋರಿಸು ಅಂತ ಒಂದೇ ಒತ್ತಾಯ ! ಗಲಾಟೆ !" ಎಂದನು ಶೌರಿ.

" ಇನ್ನೇನು ? ನಡಿ ಹಾಗಾದರೆ, ಹೋಗೋಣ " ಎಂದುವು ದೆವ್ವಗಳು ಸಂತೋಷದಿಂದ ಉಬ್ಬುತ್ತ.

" ಸ್ವಲ್ಪ ನಿಧಾನಿಸಿರಿ. ಮಕ್ಕಳು ಸಂತೋಷಪಟ್ಟರು ನಿಜ. ಅಷ್ಟರಿಂದ ಲಾಭವಿಲ್ಲ. ದೊಡ್ಡವರು ತಾನೇ ಮಕ್ಕಳಿಗೆಲ್ಲ ದೆವ್ವಗಳ ಗುಮ್ಮಗಳನ್ನು ಗುಳಿಗೆ ಮಾಡಿ ನುಂಗಿಸುವುದು ? ಆದ್ದರಿಂದ ಆ ದೊಡ್ಡವರಿಗೆಕೂಡಾ ಸ್ವಲ್ಪ ಸ್ವಲ್ಪ ಹಣ ಕೊಟ್ಟು ಒಳ್ಳೇದು ಮಾಡಿಕೊಳ್ಳ ಬೇಕು. ನಿಮ್ಮನ್ನು ನೋಡುವವರೆಗೂ ನನಗೆ ಗೊತ್ತಾಗಲಿಲ್ಲ. ನೀವು ಹೇಳಿದ ಹಾಗೆ ಮನುಷ್ಯರಿಗೆ ಹಣವೆಂದರೆ ಬಹು ಕೆಟ್ಟ ಆಸೆ ! ನೀವು ಕೊಟ್ಟ ಹಣವೆಲ್ಲಾ ಮಕ್ಕಳಿಗೆ ಸರಿಹೋಯಿತು" ಎಂದನು ಶೌರಿ.

" ಹಾಗನ್ನು ! ನಿಮಗಿಂತ ಹೆಚ್ಚಿನ ಬುದ್ಧಿ ನಮಗಿದೆಯಷ್ಟೆ ? ಈಗ ಗೊತ್ತಾಯಿತಷ್ಟೇ ?" ಎಂದು ದೆವ್ವಗಳು ಇನ್ನಿಷ್ಟು ಹಣವನ್ನು ಮೂಟೆಗಟ್ಟಿ ಶೌರಿಗೆ ಕೊಟ್ಟುವು.

ಶೌರಿಯ ಹೆಂಡತಿ ಗಂಡನು ತಂದ ಹಣದ ಗಂಟನ್ನು ನೋಡಿ, " ಇವು ಯಾವುದೋ ಹುಚ್ಚು ದೆವ್ವಗಳಾಗಿವೆ. ತುಂಬಾ ಹಣವಿರುವ ದೆವ್ವಗಳು !

ಅವುಗಳಿಂದ ಇನ್ನಷ್ಟು ಹಣವನ್ನು ಬರಮಾಡಿಕೊಂಡು ಅವುಗಳಿಂದ ಶಾಶ್ವತವಾಗಿ ಬಿಡುಗಡೆ ಹೊಂದಬೇಕು. ಯಾವಾಗಲೂ ದೆವ್ವಗಳ ಸಂಬಂಧ ಒಳ್ಳೇದಲ್ಲ. ಅದಕ್ಕಾಗಿ ಒಂದು ರಾತ್ರಿ ಈ ಊರಿನ ಜನರನ್ನೆಲ್ಲಾ ಸಂತೇ ಮೈದಾನದಲ್ಲಿ ಸೇರಿಸಿ, ಅವುಗಳೊಂದಿಗೆ ಸ್ನೇಹಮಾಡಿಸುವುದಾಗಿ ಹೇಳಿರಿ, ಅವು ಒಪ್ಪಿಕೊಂಡರೆ ಹೀಗೆ ಮಾಡಿರಿ" ಎಂದು ಮತ್ತೇನೋ ಗುಟ್ಟಾಗಿ ಗಂಡನ ಕಿವಿಯಲ್ಲಿ ಹೇಳಿದಳು.

ಶೌರಿ ಹೆಂಡತಿಯ ಬುದ್ಧಿವಂತಿಕೆಯನ್ನು ಮೆಚ್ಚಿಕೊಂಡು ಆ ದಿನ ರಾತ್ರಿ ದೆವ್ವಗಳ ಬಳಿಗೆ ಹೋಗಿ, "ನೀವು ಕೊಟ್ಟ ಹಣವನ್ನು ತೆಗೆದುಕೊಂಡು ದೊಡ್ಡವರೆಲ್ಲಾ ತುಂಬಾ ಸಂತೋಷಪಟ್ಟರು. ಇನ್ನೂ ಅವರಲ್ಲಿ ಮೂಢವಿಶ್ವಾಸದಲ್ಲಿ ಮುಳುಗಿ ಹೋದ ಹೆಂಗುಸರಿದ್ದಾರಷ್ಟೆ ? ಅವರಿಗೆ ಅಷ್ಟೇನೂ ತೃಪ್ತಿಯಾಗಲಿಲ್ಲ. ಏನೇನೋ ಹೇಳುತ್ತಾರೆ ! ಅವರಿಗಾಗಿ ಈಗ ಸ್ವಲ್ಪ ಹಣಕೊಟ್ಟು. ನಾಳೆ ರಾತ್ರಿ ಊರೊಳಗಿನ ಸಂತೆ ಮೈದಾನದ ಹತ್ತಿರ ಬಂದುಬಿಡಿ" ಎಂದನು. ದೆವ್ವಗಳು ಮೂರನೇ ಬಾರಿ ಕೊಟ್ಟ ಹಣವನ್ನು ಶೌರಿ ತನ್ನ ಮನೆಯಲ್ಲಿ ಅಡಗಿಸಿಟ್ಟನು.

ಆಮೇಲೆ ಶೌರಿ ಊರವರನ್ನೆಲ್ಲಾ ಒಂದು ಕಡೆ ಸೇರಿಸಿ. "ಒಂದು ಹೊಸ ಸಂಗತಿ ಕೇಳಿರಿ. ಈ ದಿನ ರಾತ್ರಿ ಮೊದಲನೇ ಜಾಮದ ಹೊತ್ತಿಗೆ ದೆವ್ವಗಳು ಸಂತೇ ಮೈದಾನಕ್ಕೆ ಬರುತ್ತವೆ. ಅವುಗಳನ್ನು ಕಣ್ಣಾರೆ ನೋಡ ಬೇಕೆಂದಿದ್ದವರು ಅಲ್ಲಿಗೆ ಬನ್ನಿ. ಹೆಚ್ಚಿನ ಸಮಾಚಾರ ಅಲ್ಲಿ ಹೇಳುತ್ತೇನೆ" ಎಂದನು.

ಜನರು ಕುತೂಹಲದಿಂದ ಬೇಗನೇ ಊಟಮುಗಿಸಿ ರಾತ್ರಿಯಾದ ಕೂಡಲೇ ಮೈದಾನದಲ್ಲಿ ಸೇರ ತೊಡಗಿದರು. ಶೌರಿ ಅವರೊಂದಿಗೆ, "ನಿಜ ಸಂಗತಿ ಏನೆಂದರೆ ನನಗೆ ಈ ಮಧ್ಯ ಆಕಸ್ಮಿಕವಾಗಿ ದೂರದ ಬಂಧುಗಳೊಬ್ಬರ ಸೊತ್ತು ಪೂರಾ ಸಿಕ್ಕಿಬಿಟ್ಟಿದೆ. ಊರವರೊಡನೆ ಸತ್ಯಹೇಳುತ್ತೇನೆ. ಅದರಲ್ಲಿಯ ಒಂದು ಭಾಗವನ್ನು ಊರವರ ಪ್ರಯೋಜನಕ್ಕಾಗಿ ಒಂದು ಉಚಿತ ವೈದ್ಯಶಾಲೆ ಕಟ್ಟಿಸುತ್ತೇನೆ. ಆದರೆ



ನಿನ್ನೆ ರಾತ್ರಿ ನಾನು ನಿದ್ದೆಯಲ್ಲಿರುವಾಗ ಮೂರು ದೆವ್ವಗಳು ನನ್ನನ್ನು ತಟ್ಟಿ ಎಬ್ಬಿಸಿ, ಹಾಗೆ ವೈದ್ಯಶಾಲೆ ಕಟ್ಟಿಸಬಾರದೆಂದು ಒತ್ತಿ ಹೇಳಿದುವು. ಇತ್ತೀಚೆಗೆ ಅವುಗಳ ಲೋಕಕ್ಕೆ ಬರುವವರ ಸಂಖ್ಯೆ ಕಡಿಮೆಯಾಗಿದೆಯಂತೆ. ಇವತ್ತು ರಾತ್ರಿ ಇಲ್ಲಿಗೆ ಬಂದು ಕೆಲವರನ್ನು ಎಳೆದುಕೊಂಡು ಹೋಗುತ್ತ ವಂತೆ. ನೀವೆಲ್ಲಾ ಧೈರ್ಯದಿಂದ ಅವನ್ನು ಹೊಡೆದು ಓಡಿಸಬೇಕು. ಎಲ್ಲರೂ ಒಗ್ಗಟ್ಟಾಗಿದ್ದರೆ ಅವು ಹೆದರಿ ಓಡುತ್ತವೆ" ಎಂದನು.

ಜನರು ಹೆದರಿಯೂ, ಧೈರ್ಯದಿಂದಲೂ ಕಲಕಲಮಾಡಿಕೊಂಡಿದ್ದಾಗಲೇ ಮೂರು ದೆವ್ವಗಳು ನಗುನಗುತ್ತಾ ಜನರಬಳಿಗೆ ಬಂದುವು. ಕೆಲವರು ಹೆದರಿ ಓಡಿದರು. ಧೈರ್ಯಶಾಲಿಗಳು ಕಲ್ಲುಗಳನ್ನೂ, ಚಪ್ಪಲಿಗಳನ್ನೂ ಬೀಸ ತೊಡಗಿದರು. ಕೆಲವರು ಹ್ರಾಂಹ್ರೀಂ ಎಂದು ಮಂತ್ರ ಕೂಗಿದರು. ದೆವ್ವಗಳು ಎಲ್ಲರಿಗೂ ಕೈಮುಗಿದು, "ಮನುಷ್ಯ ಮಿತ್ರರೇ, ದುಡುಕಬೇಡೀ ! ನಾವು ನಿಮ್ಮ ಸ್ನೇಹಕ್ಕಾಗಿ ಬಂದೆವು!" ಎಂದು ಕೂಗಿದುವು.

ಆದರೂ ಜನರು ಅವುಗಳ ಮೇಲೆ ಕಲ್ಲು ಮಣ್ಣುಗಳನ್ನು ಬೀಸುತ್ತಿದ್ದರು. ದೆವ್ವಗಳು ನಿರಾಶೆ ಯಿಂದ ಹಿಂದಿರುಗಿ ಹೋಗ ತೊಡಗಿದುವು. ಶೌರಿ ಸ್ವಲ್ಪದೂರ ಅವುಗಳ ಹಿಂದೆಯೇ ಹೋಗಿ, "ನೋಡಿದಿರಾ, ಮನುಷ್ಯರು ಎಂಥ ಸ್ವಾರ್ಥ ಪರರಪ್ಪಾ ! ನಿಮ್ಮ ಹಣ ಅವರಿಗೆ ಬೇಕು. ಸ್ನೇಹಮಾತ್ರ ಬೇಡ ! ನಂಬುಗೆ ಗೇಡಿಗಳು ! ಇನ್ನೇನು ಮಾಡಲಪ್ಪಾ!" ಎಂದು ಕೋಪಾವೇಶದ ರಾಗದಲ್ಲಿ ಹೇಳಿದನು.

"ಹೌದೌದು, ನೀನೂ ಒಬ್ಬ ಮನುಷ್ಯ ಎಂಬುದು ನೆನಪಿಟ್ಟುಕೋ. ಇನ್ನು ಬಾ ಆ ಪೊಟರೇ ಹತ್ರ ! ಏನು ಮಾಡುತ್ತೇವೋ ನೋಡು !" ಎಂದು ಹೇಳಿ ಮಾಯವಾದುವು.

ಪೀಡೆ ಕಳೆಯಿತೆಂದು ಶೌರಿ ಮನೆಗೆ ಹೋಗಿ ಸೇರಿದನು. ಮನೆಯಲ್ಲಿ ಅವನ ಹೆಂಡತಿ ಭಾಗ್ಯಳು ನರಳಿಕೊಂಡಿದಳು. ಶೌರಿ ಕಣ್ಣು ಕಣ್ಣು ಬಿಟ್ಟನು, ಊರ ಜನರೊಂದಿಗೆ ತನಗೆ ಹೇರಳ ಸೊತ್ತು ಬಂದಿದೆ ಎಂದು ಹೇಳುವುದನ್ನು ಗಜಕಳ್ಳನೊಬ್ಬ ಕೇಳಿ, ತನ್ನವರೊಂದಿಗೆ ಅವನ ಮನೆಯೊಳಗೆ ನುಗ್ಗಿ, ಭಾಗ್ಯಳನ್ನು ಕಂಬಕ್ಕೆ ಕಟ್ಟಿ, ದೆವ್ವಗಳು ಕೊಟ್ಟ ಹಣವನ್ನೂ ಮನೆಯಲ್ಲಿದ್ದುದೆಲ್ಲವನ್ನೂ ದೋಚಿ ಕೊಂಡು ಹೋಗಿದ್ದನು.

ಶೌರಿ ಹೆಂಡತಿಯ ಕಟ್ಟುಗಳನ್ನು ಬಿಚ್ಚುತ್ತ. "ಮನುಷ್ಯರಿಗೆ ಮೋಸಮಾಡಿದರೂ, ದೆವ್ವಗಳಿಗೆ ಮೋಸಮಾಡಿದರೂ ಮೋಸವು ಮೋಸವೇ ! ಪ್ರಾಯಶ್ಚಿತ್ತ ತಪ್ಪದು !" ಎಂದನು.





# ಹಗೆ ಹೋಯಿತು

ಪೂರ್ವಕಾಲದಲ್ಲಿ ನವಗಿರಿ ರಾಜ್ಯಕ್ಕೂ, ಹಿಮಗಿರಿ ರಾಜ್ಯಕ್ಕೂ ಸರಿಹದ್ದು ಪ್ರದೇಶದಲ್ಲಿ ವಾಸಮಾಡುವ ಜನರ ನಡುವೆ ಸಣ್ಣದೊಂದು ಜಗಳವಾಯಿತು. ಅದು ದೊಡ್ಡ ಹೊಡೆದಾಟವಾಗಿ ರಾಜರವರೆಗೂ ಹೋಗಿ ಕಡೆಗೆ ಎರಡು ರಾಜ್ಯಗಳ ನಡುವೆ ಬದ್ಧ ಶತ್ರುತ್ವವಾಗಿ ಪರಿಣಮಿಸಿತು. ಎರಡು ರಾಜ್ಯಗಳ ನಡುವೆ ಬರುಹೋಗುವಿಕೆ ರದ್ದಾದುವು.

ನವಗಿರಿಯನ್ನು ಅಮರೇಂದ್ರನೂ, ಹಿಮಗಿರಿಯನ್ನು ವಿಜಯಭೂಷಣನೂ ಪರಿಪಾಲನೆ ಮಾಡುತ್ತಿದ್ದರು. ಈ ಎರಡು ರಾಜರ ಹಗೆಯು ಕಾರಣದಿಂದಾಗಿ ಕರ್ಪೂರ ದೇಶವು ಇಕ್ಕಟ್ಟಿಗೆ ಸಿಕ್ಕಿಕೊಂಡಿತು. ಆ ದೇಶದ ಒಂದುಬದಿಗೆ ನವಗಿರಿ ಸಪ್ತಗಿರಿ ರಾಜ್ಯಗಳ ಮೇರೆಗಳಿದ್ದುವು. ಕರ್ಪೂರ ದೇಶದ ರಾಜನು ಮಣಿಕಂಕ.

ಮಣಿಕಂಕ ರಾಜನ ಕರ್ಪೂರ ರಾಜ್ಯವು ನವಗಿರಿ ಹಿಮಗಿರಿಗಳಿಗಿಂತಲೂ ವಿಶಾಲವಾಗಿತ್ತು. ಸೈನಿಕ ಬಲದ ವಿಷಯದಲ್ಲಿ ಸುತ್ತುಮುತ್ತಲಿನ ರಾಜ್ಯಗಳು ಕರ್ಪೂರ ದೇಶಕ್ಕೆ ಸಾಟಿಯಾಗುವಂತಿರಲಿಲ್ಲ. ಆದರೂ ಮಣಿಕಂಕ ರಾಜನು ರಾಜ್ಯಾಕಾಂಕ್ಷೆಯುಳ್ಳವನಲ್ಲವೆಂದು ಎಲ್ಲಾ ರಾಜರಿಗೂ ಗೊತ್ತಿತ್ತು. ಬೇರೆ ರಾಜ್ಯಗಳಿಂದ ಕರ್ಪೂರದೇಶಕ್ಕೆ ಒದಗ ಬೇಕಾಗಿದ್ದ ನಿತ್ಯಾಗತ್ಯ ವಸ್ತುಗಳು ನವಗಿರಿ ಹಿಮಗಿರಿಗಳ ಮೇಲಿಂದಾಗಿಯೇ ರವಾನೆಯಾಗುತ್ತಿದ್ದುವು. ಈಗ ಆ ಎರಡು ರಾಜ್ಯಗಳ ನಡುವಿನ ಶತ್ರುತ್ವದಿಂದಾಗಿ ಸರಕುಗಳ ರವಾನೆ ನಿಂತು ಹೋಯಿತು.

ಈ ವಿಷಮಪರಿಸ್ಥಿತಿಯನ್ನು ಹೇಗೆ ಸುಗಮಗೊಳಿಸುವುದೆಂದು ಮಣಿಕಂಕರಾಜನು ಬಹಳವಾಗಿ ಆಲೋಚನೆ ಮಾಡಿದನು. ಯುದ್ಧಮಾಡಿ ಆ ಎರಡು ರಾಜ್ಯಗಳನ್ನೂ ತನ್ನ ಆಧೀನಕ್ಕೆ ತಂದುಕೊಳ್ಳುವುದು ಸುಲಭವಾದರೂ ಪ್ರಾಣನಷ್ಟವಾಗುವುದು ಅವನಿಗೆ ಇಷ್ಟವಿರಲಿಲ್ಲ.

ಈ ಪರಿಸ್ಥಿತಿಯಲ್ಲಿ ಮಂತ್ರಿಯಾದ ವೀರಶರ್ಮನು ಒಂದು ಉಪಾಯವನ್ನು ಮಣಿಕಂಕ ರಾಜನಿಗೆ ಹೇಳಿದನು. ಅದು ಒಳ್ಳೆಯ ಉಪಾಯವೆಂದು ರಾಜನಿಗೆ ಒಪ್ಪಿಗೆಯಾಯಿತು. ಮರುದಿನವೇ ನವಗಿರಿ ಮತ್ತು ಹಿಮಗಿರಿ ರಾಜ್ಯದ ರಾಜರಿಗೆ ದೂತರ ಮುಖಾಂತರವಾಗಿ ಒಂದು ಸಮಾಚಾರ ಹೋಯಿತು. ಕರ್ಪೂರ ದೇಶವು ಇಂತಹ ದಿನ ನವಗಿರಿಯ ಮೇಲೆ

ರಾಂಬಾಬು

ಮೊದಲು ದಾಳಿ ಹೊರಡುವುದೆಂದೂ, ಅದು ಸ್ವಾಧೀನವಾದ ಕೂಡಲೇ ಹಿಮಗಿರಿ ರಾಜ್ಯವನ್ನೂ ಮುತ್ತಿಗೆ ಹಾಕಿ ಸ್ವಾಧೀನಪಡಿಸಿಕೊಳ್ಳುವುದೆಂದೂ ಆ ಸಮಾಚಾರದ ಸಾರಾಂಶವಾಗಿತ್ತು.

ಶಾಂತಿಕಾಮನೆಂದು ಹೆಸರು ಪಡೆದ ಮಣಿಕಂಕನಿಂದ ಈ ಸಮಾಚಾರವು ಬರುತ್ತಲೇ, ನವಗಿರಿ ರಾಜನಾದ ಅಮರೇಂದ್ರನೂ, ಹಿಮಗಿರಿ ರಾಜ ವಿಜಯಭೂಷಣನೂ ಆಶ್ಚರ್ಯಪಟ್ಟರು. ತಮ್ಮ ರಾಜ್ಯಗಳ ನಡುವಿನಲ್ಲಿರುವ ಹಗೆಯನ್ನು ಸಹಾಯವಾಗಿ ತೆಗೆದುಕೊಂಡು ಮಣಿಕಂಕನು ತಮ್ಮ ರಾಜ್ಯಗಳನ್ನು ಕಬಳೀಕರಿಸಲು ನೋಡುತ್ತಾನೆಂದಾಯಿತು.

ಕೂಡಲೇ ಆ ಇಬ್ಬರು ಹಗೆಗಳಾದ ರಾಜರ ನಡುವೆ ಮಾತುಕತೆಗಳು ತೊಡಗಿದುವು. ಮೊದಲು ಆ ರಾಜ್ಯಗಳ ಮಂತ್ರಿಗಳೇ ಮಾತು ಪ್ರಾರಂಭಿಸಿದರು. ತಮ್ಮೊಳಗಿನ ಹಗೆಯನ್ನು ಬಿಟ್ಟು ಐಕಮತ್ಯದಲ್ಲಿ ನಿಂತರೆ ಮಣಿಕಂಕನು ತಮ್ಮ ಮೇಲೆ ದಾಳಿ ತೆಗೆಯಲು ಸಾಹಸ ಮಾಡಲಾರನೆಂಬ ನಿರ್ಣಯಕ್ಕೆ ಉಭಯ ರಾಜರೂ ಬಂದರು. ಅಂತಲೇ ಇಬ್ಬರೂ ಸೈನಿಕ ಸನ್ನಾಹಗಳಿಗೆ ತೊಡಗಿದರು.

ತಮ್ಮ ಸೈನಿಕ ಬಲಸನ್ನದ್ಧತೆಗಳೆಲ್ಲ ತೃಪ್ತಿಕರವಾಗಿ ನಡೆದ ಮೇಲೆ, ನವಗಿರಿ ಹಿಮಗಿರಿ ರಾಜರಿಬ್ಬರೂ ದೂತರ ದ್ವಾರಾ ಮಣಿಕಂಕ ರಾಜನಿಗೆ ಸಮಾಚಾರ ಕಳುಹಿಸಿದರು. ನವಗಿರಿಯ ಮೇಲೆ ಮಾಡುವ ದುರಾಕ್ರಮಣವನ್ನು ಹಿಮಗಿರಿ ಸಹಿಸಲಾರದೆಂದೂ, ಹಾಗೆಯೇ ಹಿಮಗಿರಿಯ ಮೇಲೆ ಆಕ್ರಮಣ ನಡೆದರೆ ನವಗಿರಿಯೂ ಸುಮ್ಮನಿರಲಾರದೆಂದೂ ಎಚ್ಚರಿಸುವ ಸಮಾಚಾರವಾಗಿತ್ತು ಅದು.

ಮಣಿಕಂಕನು ಯುದ್ಧಕ್ಕೆ ಹೊರಡುವೆನೆಂದು ಹೇಳಿದ ದಿನವೂ ಬಂದಿತು. ಆದರೆ ಕರ್ಪೂರ ದೇಶದಿಂದ ಯಾವ ಸೈನಿಕರ ಸಾಲೂ ಕದಲುವುದು ಕಾಣಲಿಲ್ಲ. ಅಸಲು ಆ ದೇಶದಲ್ಲಿ ಯುದ್ಧ ಪ್ರಯತ್ನಗಳಾವುದೂ ನಡೆಯಲೇ ಇಲ್ಲವೆಂದು ಚಾರರ ಮೂಲಕವಾಗಿ ತಿಳಿದುಕೊಂಡು ಅಮರೇಂದ್ರನೂ, ವಿಜಯಭೂಷಣನೂ ಅತ್ಯಾಶ್ಚರ್ಯಪಟ್ಟರು. ತಮ್ಮ ಸಖ್ಯತೆಯ ಐಕಮತ್ಯದಿಂದಲೇ ಮಣಿಕಂಕನು ತಮ್ಮ ದೇಶಗಳ ಮೇಲೆ ಯುದ್ಧಕ್ಕೆ ಹೊರಡಲು ಭಯಪಟ್ಟನೆಂದು ಅವರು ಗಟ್ಟಿಯಾಗಿ ನಂಬಿದರು. ಮಣಿಕಂಕನ ಯುದ್ಧ ಪ್ರಕಟನೆ ನವಗಿರಿ ಹಿಮಗಿರಿಗಳ ಹಗೆಯನ್ನು ಹೋಗಲಾಡಿಸಿ, ಶಾಶ್ವತ ಮೈತ್ರಿಗೂ ದಾರಿಯಾಗಿತ್ತು.

ಹೀಗೆ ಕರ್ಪೂರ ದೇಶದ ಮಂತ್ರಿ ಮಾಡಿದ ಉಪಾಯದಿಂದ ಎರಡು ಶತ್ರು ರಾಜ್ಯಗಳ ನಡುವೆ ಸ್ನೇಹವು ಬಲವಾದುದು ಮಾತ್ರವಲ್ಲದೆ, ಆ ದೇಶಗಳ ಮೂಲಕ ಕರ್ಪೂರ ದೇಶಕ್ಕೆ ಬರುವ ಸರಕುಗಳ ರವಾನೆಯ ಸಮಸ್ಯೆಯೂ ಪರಿಹಾರವಾಯಿತು.





**ಈ** ನಡುವೆ ಉತ್ತರ ಭಾರತದಲ್ಲಿ ಒಂದು ಸಂಗತಿ ನಡೆದಿತ್ತು. ಅದೇನೆಂದರೆ, ಸಾಧಾರಣವಾಗಿ ಗಂಗಾ ಪಾರ್ವತಿಯರ ನಡುವೆ ಮತ್ಸರವೂ ದ್ವೇಷವೂ ಇದ್ದೇ ಇರುವಾಗ, 'ಗಂಗಾಪುಷ್ಕರ'ದ ಕಾಲವು ಬಂತು.

ಆ ಸಮಯದಲ್ಲಿ ನಾರದನು ಪಾರ್ವತಿಯ ಬಳಿಗೆ ಬಂದು, "ಈಗ ನೋಡಿದಿಯಾ ತಾಯೇ, ಮುಕ್ಕೋಟಿ ದೇವತೆಗಳ ಮಹತ್ವವೂ ಶಕ್ತಿಗಳೂ ಗಂಗಾಜಲಕ್ಕೆ ಸಂಕ್ರಮಿಸುವ ಹಾಗೆ ಪುಷ್ಕರ ಸ್ನಾನವನ್ನು ಮಾಡುತ್ತಾ ಇದ್ದಾರೆ. ಅಮ್ಮಾ ಗೌರಿ, ನೀನು ಕೂಡಾ ಹೋಗಿ ಪುಷ್ಕರ ಸ್ನಾನ ಮಾಡಬಾರದೆ? ಹಾಗೆ ಮಾಡಿದರೆ, ನೀನು ಸ್ವಲ್ಪವೂ ಮತ್ಸರ ದ್ವೇಷಗಳಿಲ್ಲದ ಪರಿಶುದ್ಧವಾದ ವಿಶಾಲ ಹೃದಯದವಳೆಂದು, ತುಂಬಾ ಒಳ್ಳೆಯವಳೆಂದು ಲೋಕವು ನಿನ್ನನ್ನು ಮೆಚ್ಚಿಕೊಳ್ಳುತ್ತದೆ!" ಎಂದು ಹೇಳಿದನು. ಹಾಗೆ ಮಾಡುವುದು ಒಳ್ಳೆಯದೆಂದು ಪಾರ್ವತಿಗೂ ತೋರಿತು. ಆ ವರೆಗೂ ಅವಳು ಗಂಗಾ ಪುಷ್ಕರದಲ್ಲಿ ಮಿಂದವಳಲ್ಲ.

ಅಲ್ಲಿಂದ ಹೊರಟ ನಾರದನು ಗಂಗೆಯ ಬಳಿಗೆ ಹೋಗಿ "ಅಮ್ಮಾ, ಗಂಗಾ ಭವಾನೀ! ನಿನ್ನನ್ನು ಪಾವನ ಮಾಡೋಣವೆಂದು ಪಾರ್ವತಿ ನಿನ್ನಲ್ಲಿ ಪುಷ್ಕರ ಸ್ನಾನ ಮಾಡಲು ಬರುತ್ತಾಳೆ. ನಿನ್ನ ಪುಣ್ಯ" ಎಂದನು.

"ಹಾಗೇನು? ತಾನು ತುಂಬಾ ದಯಾದಾಕ್ಷಿಣ್ಯದವಳೆಂದು ಪ್ರಪಂಚಕ್ಕೆ ತೋರಿಸಲು ಬರುತ್ತಾಳೆಂದು ಕಾಣುತ್ತೆ. ಬರಲಿ, ಹೇಳುತ್ತೇನೆ!" ಎಂದಳು ಗಂಗೆ.

ಪಾರ್ವತಿ ಎಲ್ಲರಂತೆ ಹೂಗಳಿಂದ ಅರ್ಚಿಸಿ ಗಂಗೆಯಲ್ಲಿ ಇಳಿದಳೋ ಇಲ್ಲವೋ, ಆಗ ಗಂಗೆ "ನಿಲ್ಲಲ್ಲಿ! ನನ್ನನ್ನು ಮುಟ್ಟಿ ಮಲಿನ ಮಾಡಬೇಡ" ಎಂದು ತಡೆದಳು. ಇಬ್ಬರಿಗೂ ದೊಡ್ಡ ವಿವಾದವೇ ನಡೆಯಿತು.

"ಇಷ್ಟು ವರ್ಷ ಬಾರದವಳು ನಿನ್ನ ವಿಷಯ ತಿಳಿದೇ ಬರಲಿಲ್ಲವೆಂದುಕೊಂಡರೆ, ಈಗೇಕೆ ಬಂದಿ? ಇಬ್ಬರು ಮಕ್ಕಳಿದ್ದಾವೆ ಅಂತ ಪರಿಶುದ್ಧಳಾದೆಯಾ? ಕುಮಾರಸ್ವಾಮಿಯನ್ನು ಶರವಣ ಸರೋವರವು

೧೦. ಗೋದಾವರಿಯ ಅವತರಣ



ಹಡೆಯಿತು. ನಿನ್ನ ಗೊಡ್ಡು ಕೈಗಳಲ್ಲಿ ಹಿಚುಕಿಸಿಕೊಂಡು ಬಂದ ಬೊಂಬೆ ಮಗು ಪಾಪ, ಗಜಮುಖನಾದನು. ನೀನು ದೊಡ್ಡ ಬಂಡೇ ಬಂಜೆ! ಹೋಗಾಚೆ!" ಎಂದಳು ಗಂಗೆ.

"ನನ್ನನ್ನು ಏನೆಂದುಕೊಂಡೆಯೇ? ಪರಮಶಿವನ ಅರ್ಧಾಂಗಿ, ಭಾಗೇಶ್ವರಿ! ನನ್ನನ್ನು ನಿಂದಿಸುವಷ್ಟು ಗರ್ವ ಬಂತೇನೆ?" ಎಂದಳು ಪಾರ್ವತಿ.

"ಎಲ್ಲಾ ಗೊತ್ತೇ! ಮಾಡಿಕೊಂಡ ಪಾಪದ ಗಂಡನನ್ನು ಅರ್ಧ ತಿಂದು ಹಾಕಿದ ಪರಮ ಪಾತಕಿ" ಎಂದಳು ಗಂಗೆ.

"ಜಾರಿ ಬಿದ್ದ ಭ್ರಷ್ಟೆ ನೀನು!" ಎಂದು ಪಾರ್ವತಿ ಹೇಳಿದರೆ, "ಆತನು ನುಂಗಿದ ಹಾಲಾಹಲವು ಕುತ್ತಿಗೆಯಲ್ಲಿ ಸಿಕ್ಕಿಕೊಂಡು ಉರಿಯುತ್ತಿರುವಾಗ, ನಾನು ತಣಿಸಿದೆ. ಅದಕ್ಕೆ ಮೆಚ್ಚಿ ನನ್ನನ್ನು ಮನೋಹರ ಕುಸುಮ ಕುಮಾರಿಯಾಗಿ ಮಾಡಿ ಧರಿಸಿಕೊಂಡ ಜಗದ್ರಕ್ಷಕನಿಗೆ ನಾನು ಇಷ್ಟಳೋ ಭ್ರಷ್ಟಳೋ ಎಂಬುದು ಲೋಕಕ್ಕೇ ಗೊತ್ತಿದೆ! ನೀನೇನು ಹೇಳಿದರೆ ಆಯಿತೆ?" ಎಂದಳು ಗಂಗೆ.

"ಯಾರೋ ಒಬ್ಬ ಕೂಗಿ ಕರೆದರೆ ಓಡಿಬಂದು ಸಿಕ್ಕಿಕೊಂಡವಳು ನೀನು! ಬುದ್ಧಿಗೇಡಿ, ಚಪಲೆ! ಸುಕುಮಾರಿಯಂತೆ,ಸುಕುಮಾರಿ!"ಎಂದಳು ಪಾರ್ವತಿ.

"ನೀನೆಂಥವಳೇ? ಬಲಿಗಳಿಗೆ ಬಾಯಿ ಬಿಡುವ ಕಲ್ಗುಂಡಿಗೆಯ ಮಾರಮ್ಮ! ಮಾತಾಯಿ! ವಾಮಾಚಾರಿಣಿ! ಮಲಿನದವಳು! ಮುಟ್ಟಲಾಗದ ಮಾತಂಗಿನಿ! ಮೊರಟೆ! ಶಕ್ತಿದೇವಿ ಅಂತ ನಾಲಗೆ ಚಾಚಿ ಹಾರುವವಳು!" ಎಂದು ಗಂಗೆ ಬಡಬಡನೆ ಹೇಳಿದಳು.

"ಹೌದೇಹೌದು! ಚೆನ್ನಾಗಿ ನೆನಪು ಮಾಡಿದೆಯೇ ಗಂಗಾ! ನಾನು ಶಕ್ತಿ, ಮಹಾಶಕ್ತೀದೇವಿ!" ಎಂದು ಪಾರ್ವತಿ ಆವೇಶ ತಾಳಿದಳು. ಆದರಿಂದ ಲೋಕದಲ್ಲಿ ಶಕ್ತಿಯ ಒತ್ತಡವೆದ್ದಿತು, ಪ್ರಳಯಪ್ರಭಂಜನವು ಬೀಸತೊಡಗಿತು. ಮುಸುಕಿಕೊಂಡು ಬರುವ ಕಾರ್ಮುಗಿಲುಗಳಿಂದ ಕತ್ತಲೆ ಹರಡಿತು. ಕೋಲ್ಮಿಂಚುಗಳೊಂದಿಗೆ ಗಗನ ಗರ್ಜನೆ ಮೊಳಗಿತು. ಸಿಡಿಲುಗಳು ಹೊಡೆದುವು. ಭೂಮಿ ಕಂಪಿಸಿ ಮಂಜಿನ ಶಿಖರಗಳು ಉರುಳಿದುವು. ಪ್ರಕೃತಿ ಸಂಕ್ಷೋಭೆಯಿಂದ ಪ್ರಜೆಗಳೂ ಪ್ರಾಣಿಕೋಟಿಗಳೂ ಹಾಹಾಕಾರ ಮಾಡಿದರು.

ಈ ಬಗೆಯ ಪಾರ್ವತಿಯ ಮಹಾವೇಶಕ್ಕೆ ಗಂಗೆ ಪರಿಹಾಸ ಮಾಡುತ್ತಾ "ಸಾಕು ನಿಲ್ಲಿಸೇ. ತಣ್ಣಗಿನವಳಾದ ನಾನು ಸ್ವಲ್ಪ ಬಿಸಿಯೇರಿಸಿಕೊಂಡು ಹೇಳಿದ್ದಕ್ಕೇ ಇಷ್ಟೆಲ್ಲಾ ಹಾರುವಿಯಾ? ನಾನೂ ಮಹಾಜಲಶಕ್ತಿ ಎಂಬುದನ್ನು ನೆನಪಿಟ್ಟುಕೋ. ನೋಡೇ, ನೋಡು! ಈಗ ನನ್ನನ್ನು ಕೆರಳಿಸಿದ ಪಾಪ ನಿನ್ನದೇ!" ಎಂದು ಗಂಗಾದೇವಿ ಹಿಮಾಲಯದ ಶಿಖರಾಗ್ರದಷ್ಟು ಎತ್ತರಕ್ಕೆ ಉಕ್ಕೇರಿದಳು. ಗಂಗಾ ಜಲವು ಹುಚ್ಚೆದ್ದು ಹರಿದು ಉತ್ತರ ಭಾರತದ ಭೂಮಿಯನ್ನೆಲ್ಲಾ ಜಲಮಯವಾಗಿ ಮಾಡಿತು.

ಈ ವಿಪರೀತವನ್ನು ದೇವತೆಗಳೆಲ್ಲಾ ಆಕಾಶದಲ್ಲಿ ಸಾಲುಗಟ್ಟಿ ನಿಂತು ನೋಡುತ್ತಾ, "ಈ ಅಮ್ಮಂದಿರು ಮಾತಿಗೆ ಮಾತಾಡುತ್ತ ಲೋಕಕ್ಕೇ ಪ್ರಳಯ ತರುವರು!" ಎಂದು ನಿಟ್ಟುಸಿರು ಬಿಟ್ಟು, ಕಲಹದ ಬೀಜವನ್ನು ಬಿತ್ತಿದ ನಾರದನನ್ನು ಎಲ್ಲರೂ ಸೇರಿ ನಿಂದಿಸ ತೊಡಗಿದರು. "ನಿನಗೇಕೆ ಬೇಕಿತ್ತೋ ಈ ಕರ್ಮ?" ಎಂದು ಬೈದರು.

ವಿಘ್ನೇಶ್ವರನು ದಕ್ಷಿಣ ಭಾರತದಿಂದ ಹಿಂದಿರುಗಿ ಬರುತ್ತ ನಾರದನನ್ನು ನೋಡಿ, "ಇದೇನು ನಾರದಾ?" ಎಂದು ನಡೆದ ಸಂಗತಿಯನ್ನು ತಿಳಿದು, "ಓಹೋ! ಈಗ ನಿನ್ನ ಹೊಟ್ಟೆ ತುಂಬಿತೇ? ಎಂತಹ ಕಲಹ ತಂದಿಟ್ಟೆಯಯ್ಯಾ?" ಎಂದನು.

"ಇಂತಹ ಉಪದ್ರವಗಳೆಲ್ಲಾ ಬಂದರೆ ತಾನೇ ಹೊಟ್ಟೆ ತುಂಬಿದ ವಿನಾಯಕನು ಯಾರು, ಲೋಕ ಕಲ್ಯಾಣಕ್ಕಾಗಿ ಸೊಂಟ ಕಟ್ಟಿದ ನಾಯಕನು ಯಾರು ಎಂಬುದೆಲ್ಲಾ ಗೊತ್ತಾಗುತ್ತದೆ?" ಎಂದು ಹೇಳಿ ನಾರದನು ನಗಾಡಿಕೊಂಡು ನಾರಾಯಣ ನಾದವನ್ನೆಬ್ಬಿಸಿಕೊಂಡು ತನ್ನ ದಾರಿ ಹಿಡಿದು ಹೊರಟನು. ವಿಘ್ನೇಶ್ವರನು ನೇರಾಗಿ ಕೈಲಾಸವನ್ನು ತಲಪಿದನು.

ಆಗ ಗಂಗೆಯ ಉಕ್ಕೂ ತಗ್ಗಿತ್ತು. ಕೈಲಾಸದಲ್ಲಿ ಪಾರ್ವತಿ ಪಶ್ಚಾತ್ತಾಪದಿಂದ ಚಿಂತೆಯಿಂದ ಮುದುಡಿ ಕುಳಿತಿದ್ದಳು. "ಏನಿದು? ಇವಳು ಹೀಗೆ ಉಕ್ಕಿ ಬಿಟ್ಟಳಲ್ಲಾ! ಮತ್ತೊಬ್ಬ ಭಗೀರಥನು ಬಂದು ಹೊರಡಿಸಿಕೊಂಡು ಹೋದರೆ ಹೊರತು ಇವಳ ಸೊಕ್ಕಿನ ಉಕ್ಕು ತಗ್ಗುವಂತಿಲ್ಲ." ಎಂದು ಅವಳು ತನಗೆ ತಾನೇ ಹೇಳಿಕೊಂಡ ಮಾತು ವಿನಾಯಕನ ಕಿವಿಗೆ ಬಿತ್ತು.

ವಿನಾಯಕನು ಏನೂ ತಿಳಿಯದಂತೆ ಪಾರ್ವತಿಗೆ ಪಾದಾಭಿವಂದನೆ ಮಾಡಿ, "ಅಮ್ಮಾ, ನಾನೊಂದು ಒಳ್ಳೆಯ ಕೆಲಸಕ್ಕೆ ತಲೆ ಹಾಕಿದ್ದೇನೆ. ಆಶೀರ್ವಾದ ಮಾಡಮ್ಮಾ!" ಎಂದನು.




"ವಿಘ್ನೇಶ್ವರನು ತಲೆ ಹಾಕಿದ ಕಾರ್ಯಕ್ಕೆ ಅಡ್ಡಿ ಏನಿದೆಯಪ್ಪಾ? ನೀನೇನೋ ದಕ್ಷಿಣ ದೇಶದಿಂದ ತಿರುಗಿ ಬಂದ ಹಾಗಿದೆ. ಏನು ವಿಶೇಷ ಅಲ್ಲಿ?" ಎಂದು ಕೇಳಿದಳು ಪಾರ್ವತಿ.

"ಏನು ಹೇಳಲಮ್ಮಾ? ವಿಂಧ್ಯಾದ್ರಿಯಾಚೆಗೆ ತುಂಬಾ ಶೂನ್ಯವಾಗಿದೆ. ಬರಡುನೆಲವೆಂದೇ ಹೇಳ ಬಹುದು. ಆ ಪ್ರದೇಶವು ಪೈರುಪಚ್ಚೆಗಳಿಂದ ಬೆಳಗಿ ಅನ್ನಪೂರ್ಣೆ ಎಂಬ ನಿನ್ನ ನಾಮಧೇಯವನ್ನು ಸಾರ್ಥಕ ಮಾಡುವಂತಾದರೆ ಎಷ್ಟು ಒಳ್ಳೆಯದಿತ್ತು. ನಮ್ಮ ಗಂಗಮ್ಮ ಸ್ವಲ್ಪ ಆ ಕಡೆಗೆ ತಣ್ಣಗಿನ ನೋಟ ಬೀರಿಯಾಳೆ? ಏನನ್ನುವೆಯಮ್ಮಾ?" ಎಂದನು.

"ಇದರಲ್ಲಿ ನಾನು ಹೇಳುವುದಕ್ಕೇನಿದೆಯಪ್ಪಾ? ಎಲ್ಲಾ ಆ ವಿಶ್ವನಾಥನದೇ ಭಾರ. ಆತನ ಇಚ್ಛೆ!" ಎಂದಳು ಪಾರ್ವತಿ.

"ಹೀಗೆ ಹೇಳಿ ನಾವು ಸುಮ್ಮನೆ ನೋಡುತ್ತಾ ಇರಬೇಕೇನು? ನಮ್ಮ ಒಳ್ಳೆಯ ಪ್ರಯತ್ನಕೆ



ಶುಭ ಶಂಕರಪ್ಪನ ದಯವಿಲ್ಲದೇ ಇದ್ದೀತ ? ನಂಬಿ ಮುಂದುವರಿಯಲೆ ?" ಎಂದನು ಗಣಪತಿ.

"ಅದು ನಿಜ. ನಮ್ಮ ಪ್ರಯತ್ನವಂತೂ ಬೇಕೇ ಬೇಕು. ನೀನು ಮಾಡುವ ಕೆಲಸಕ್ಕಂತೂ ಹಿರಿಯರ ಬೆಂಬಲ ಇದ್ದೇ ಇರುತ್ತದೆ" ಎಂದಳು ಪಾರ್ವತಿ.

"ನೀನು ಇಷ್ಟು ಹೇಳಿದರೆ ಸಾಕಮ್ಮ. ಹೋಗಿ ಬರುತ್ತೇನೆ" ಎಂದು ಪಾರ್ವತಿಯ ಪಾದಗಳನ್ನು ಸೊಂಡಿಲಿನಿಂದ ಒತ್ತಿ ಕಣ್ಣಿಗೊತ್ತಿಕೊಂಡು ಹೊರಟ ವಿಘ್ನೇಶ್ವರನು, ನೆಟ್ಟಗೆ ಹೋಗಿ ಗೌತಮ ಮಹರ್ಷಿಯ ಆಶ್ರಮ ಪ್ರಾಂತವನ್ನು ತಲುಪಿದನು.

ಗೌತಮನು ಪಶ್ಚಿಮ ಕಣಿವೆಗಳ ನಡುವೆ ಆಶ್ರಮ ಕಟ್ಟಿಕೊಂಡು, ತನಗೆ ಬೇಕಾದಷ್ಟೇ ಸಣ್ಣ ವ್ಯವಸಾಯ ಮಾಡಿಕೊಂಡಿದ್ದನು. ಗಣಪತಿ ತನೆ ತುಂಬಿದ ಒಂದು ದನದ ರೂಪವನ್ನು ತಾಳಿದನು.

ಆ ಗಬ್ಬದ ಗೋವು ಬೆಳೆಯ ಗದ್ದೆಯನ್ನು ಮೇಯುತ್ತಾ ಇರುವುದನ್ನು ನೋಡಿ ಗೌತಮನು ಅದನ್ನು ಗದರಿಸಿ ಓಡಿಸಲು ನೋಡಿದನು. ಅದೇನೂ ಲಕ್ಷ್ಯ ಮಾಡದಿರಲು ಕಮಂಡಲುವಿನ ನೀರನ್ನು ಅಂಗೈಯಲ್ಲಿ ತೆಗೆದು ಅದರ ಮೇಲೆ ಬೀಸಿ ಒಗೆದನು. ಆ ನೀರಿನ ಚುಕ್ಕೆಗಳು ಗೋವಿನ ಮೇಲೆ ಬಿದ್ದ ಕೂಡಲೇ ಅದು ಬಿದ್ದು ತಟಪಟನೆ ಹೊರಳಿ ಮರಗಟ್ಟಿ ಸ್ತಬ್ಧವಾಯಿತು. ಹೆದರಿದ ಗೌತಮನು ತನ್ನ ಸುಕೃತವನ್ನೂ, ತಪಸ್ಸನ್ನೂ ಧಾರೆಯೆರೆದರೂ ಮುಚ್ಚಿದ ಕಣ್ಣು ತೆರೆಯಲಿಲ್ಲ ಆ ಮಾಯದ ದನ.

ಈ ಸಂಗತಿಯನ್ನು ಕೂಡಲೇ ನಾರದನು ಇಂದ್ರನೊಡನೆ ಹೇಳಿ ಹುರಿದುಂಬಿಸಿದನು. ಇಂದ್ರನಿಗೆ ಗೌತಮನ ಮೇಲೆ ಮೊದಲೇ ಹಗೆ ಇದ್ದಿತು.

ಆ ಹಗೆಗೆ ಕಾರಣ ಅಹಲ್ಯೆ. ಬ್ರಹ್ಮನು ಅಪೂರ್ವ ಸುಂದರಿಯಾಗಿ ಅಹಲ್ಯೆಯನ್ನು ಸೃಷ್ಟಿ ಮಾಡಿದ್ದನು. ಅವಳ ಮೇಲೆ ಇಂದ್ರನಿಗೆ ಬಹಳ ಆಶೆಯಾಗಿತ್ತು. ಇನ್ನೂ ಅನೇಕರು ಅಹಲ್ಯೆಯನ್ನು ಮದುವೆಯಾಗಲು ಸ್ಪರ್ಧೆಗೆ ಬಿದ್ದರು. ಆಗ ಬ್ರಹ್ಮನು ಜಗಳ ಬೇಡವೆಂದು, ಯಾರು ಭೂಮಿಯನ್ನು ಪ್ರದಕ್ಷಿಣೆ ಮಾಡಿ ಮೊದಲು ಬರುವರೋ ಅವರಿಗೇ ಅಹಲ್ಯೆಯನ್ನು ಕೊಡುವೆನೆಂದು ಪಂಥವನ್ನು ಒಡ್ಡಿದನು.

ಗೌತಮನು ಪ್ರಸವಿಸುವ ದನವನ್ನು ಪ್ರದಕ್ಷಿಣೆ ಮಾಡಿ ಬಂದು, ಅದು ಭೂ ಪ್ರದಕ್ಷಿಣೆಗೆ ಸಮಾನವೆಂದು ವಾದಿಸಿ, ಒಪ್ಪಿಸಿ ಗೆದ್ದು ಅಹಲ್ಯೆಯನ್ನು ವರಿಸಿದರು.

ಗೋವು ಭೂದೇವಿಗೆ ಸಮಾನವೆಂದು ಹೇಳಿದ ಗೌತಮನ ಕೈಯಿಂದಲೇ ಗೋಹತ್ಯವಾಗಿದೆ. ಹಗೆ ತೀರಿಸಿಕೊಳ್ಳಲು ಇದಕ್ಕಿಂತ ಒಳ್ಳೆಯ ಅವಕಾಶ ಬೇರೆನಿದೆ ? ಅಂತೆಯೇ ಇಂದ್ರನು ದೊಡ್ಡ ಮುನಿ ಪುಂಗವನ ವೇಷದಿಂದ ಎಲ್ಲಾ ಋಷಿಗಳ ಹತ್ತಿರ ಹೋಗಿ, "ಗೌತಮನು ಗೋಹತ್ಯೆ ಮಾಡಿದ ಮಹಾಪಾಪಿ ! ಅವನ ಆಶ್ರಮವು ಮೈಲಿಗೆಯಾಗಿ




ಹೋಯಿತು. ಗೌತಮನನ್ನು ನೋಡಿದರೂ, ಅವನ ಆಶ್ರಮದ ಗಾಳಿ ಸೋಂಕಿದರೂ ಮಹಾ ಪಾತಕವು ಸುತ್ತಿಕೊಳ್ಳುತ್ತದೆ ! ಗಂಗಾಜಲವು ಬಂದು ಆಶ್ರಮ ಸೀಮೆಯಲ್ಲಿರುವ ಗೋವಿನ ಮೇಲಿಂದಾಗಿ ಪ್ರವಹಿಸಿದ ಹೊರತು ಇದಕ್ಕೆ ಬೇರೆ ಪರಿಹಾರ ಏನೂ ಇಲ್ಲ !" ಎಂದು ಲೋಕವೆಲ್ಲಾ ತಿಳಿಯುವಂತೆ ಹೇಳಿದನು. ಋಷಿಗಳೆಲ್ಲಾ ಗೌತಮನನ್ನು ಬಹಿಷ್ಕರಿಸಿದರು. ಅವನ ಆಶ್ರಮವಾಸಿಗಳೆಲ್ಲಾ ಹೊರಟು ಹೋಗಿಬಿಟ್ಟರು.

ಗೌತಮನಿಗೆ ಚಿಂತೆಗಿಟ್ಟಿತು. ಎಲ್ಲಿಯ ಗಂಗಾನದಿ ! ಎಲ್ಲಿಯ ಪಶ್ಚಿಮ ಕಣಿವೆಗಳು ! ಆದರೂ ಗೌತಮನು ಬಿಡಲಿಲ್ಲ. ಭಗೀರಥನನ್ನು ಆದರ್ಶವಾಗಿಟ್ಟುಕೊಂಡು ಗಂಗಾದೇವಿಯನ್ನು ಕುರಿತು ಹಿಮಾಲಯದಲ್ಲಿ ದೊಡ್ಡ ತಪಸ್ಸು ಮಾಡಿದನು.

ಹಿಂದೆ ಕಪಿಲ ಮಹಾಮುನಿಯ ಕೋಪಾಗ್ನಿಯಿಂದ ಬೂದಿಯಾಗಿ ಹೋದ ತನ್ನ ತಾತಂದಿರನ್ನು ಪುಣ್ಯಲೋಕಕ್ಕೆ ಕಳುಹಿಸಲಿಕ್ಕಾಗಿ, ಭಗೀರಥನು ಜಲಾಧಿದೇವಿಯಾದ ಗಂಗೆಯನ್ನು ಧ್ಯಾನಿಸಿ, ತಪಸ್ಸಿನಿಂದ ಮೆಚ್ಚಿಸಿ ದಿವಿಯಿಂದ ಭುವಿಗೆ ಗಂಗೆಯನ್ನು ಇಳಿಸಿಬಿಟ್ಟಿದ್ದನು. ಆಗ ಶಿವನು ಗಂಗೆಯ ಅಪಾರ ಶಕ್ತಿಯನ್ನು ತನ್ನ ಜಟಾಜೂಟದಲ್ಲಿ ಧರಿಸಿದನು. ಅವನ ಜಡೆಗಳೆಡೆಯಿಂದ ಹರಿದ ಗಂಗೆ ಗಂಗಾಭವಾನಿ ಎನಿಸಿ, ದೊಡ್ಡ ವೇಗದಿಂದ ನಾಲ್ಕು ದಿಕ್ಕುಗಳಲ್ಲಿ ಚಿಮ್ಮಿ ಚಿಮ್ಮಿ ಹರಿದಳು. ಭಗೀರಥನ ಹಿಂದೆ ಮೂಡು ಮುಖಳಾಗಿ ಹರಿದಳು. ಅವಳಿಗೆ ಭಾಗೀರಥಿ ಎಂಬ ಹೆಸರು ಬಂದಿತು.

ಹಿಮಾಲಯದ ಮೇಲೆ ಚಿಮ್ಮಿ ಬಿದ್ದ ಗಂಗೆ ಹಿಂದೂ ಕುಶ ಪರ್ವತದ ಮೇಲಿಂದಾಗಿ ಪಶ್ಚಿಮಕ್ಕೆ ಇಂದು ನದಿ ಎನಿಸಿ ಹರಿದಳು. ಇಂದು ನದಿಯನ್ನೇ ಸಿಂಧು ನದಿಯೆಂದು ಎಲ್ಲರೂ ಕರೆದರು. ಭರತ ಖಂಡದ ವಾಯುವ್ಯ ದಿಶೆಯಲ್ಲಿರುವ ಸಿಂಧು ನದಿಯಿಂದಾಗಿ ಹಿಂದೂ ದೇಶವೆಂಬ ಹೆಸರು ಬಂತು.

ಭಗೀರಥನ ಹಿಂದೆ ಮಹಾವೇಗದಿಂದ ಹೋಗುತ್ತಿದ್ದ ಗಂಗೆ ತನ್ನ ಆಶ್ರಮವನ್ನು ಮುಳುಗಿಸದಂತೆ ಮಾಡಲು ಜಹ್ನು ಮಹಾಮುನಿ ಗಂಗೆಯನ್ನು ಕುಡಿದುಬಿಟ್ಟನು. ಭಗೀರಥನು ಜಹ್ನು ಮುನಿಯನ್ನು ಕನಿಕರಿಸುವಂತೆ ಪ್ರಾರ್ಥಿಸಿದ ಮೇಲೆ ಜಹ್ನು ತನ್ನ ಕಿವಿಯಿಂದ ಗಂಗೆಯನ್ನು ಹೊರಗೆ ಬಿಟ್ಟನು. ಅದರಿಂದ ಗಂಗೆಗೆ ಜಾಹ್ನವಿ ಎಂಬ ಹೆಸರು ಕೂಡಾ ಉಂಟಾಯಿತು. ಆಮೇಲೆ ಗಂಗೆ ಪಾತಾಳದ ಕಪಿಲಾಶ್ರಮವನ್ನು ಹಾದುಕೊಂಡು ಭಗೀರಥನ ತಾತಂದಿರ ಬೂದಿ ರಾಶಿಯ ಮೇಲಿಂದಾಗಿ ಹರಿದು ಅವನ ಪ್ರಯತ್ನವು ಫಲಿಸುವಂತೆ ಮಾಡಿದಳು.

ಈಗ ಗೌತಮನು ಮಾಡುವ ತಪಸ್ಸನ್ನು ನೋಡಿ, ಭಗೀರಥನು ಕೂಡ ಅಷ್ಟು ದೊಡ್ಡ ತಪಸ್ಸು ಮಾಡಲಿಲ್ಲವೆಂದು ಗಂಗಾದೇವಿ ಮೆಚ್ಚಿ ಅವನ ಮೇಲೆ ಪ್ರಸನ್ನಳಾಗಿ ಅವನ ಹಿಂದೆಯೇ

ಹೊರಟಳು. ದಾರಿಯುದ್ದಕ್ಕೂ ಅವಳ ಕವಲುಗಳಾಗಿ ಎಷ್ಟೋ ತೊರೆಗಳೂ ನದಿಗಳೂ ಹುಟ್ಟಿದುವು.

ಗೌತಮನ ಆಶ್ರಮವನ್ನು ಸೇರಿದ ಮೇಲೆ ಗಂಗಾ ಪ್ರವಾಹವು ಗೌತಮನ ಹಿಂದೆಯೇ ಸಾಗುತ್ತ, ಗಣೇಶ ಗೋವಿನ ಮೇಲಿಂದಾಗಿ ಪ್ರವಹಿಸಿ ಗೌತಮೀ ನದ ಎನಿಸಿದಳು. ಮಾಯಾ ಗೋವು ಧಿಗ್ಗನೆದ್ದು ನಿಜರೂಪವಾಗಿ ಮಾರ್ಪಟ್ಟಿತು. ಗಂಗಮ್ಮನ ಉಕ್ಕಿನಿಂದಾಗಿ ಒಳ್ಳೆಯ ಪರಿಣಾಮ ಬಂತೆಂದು ವಿಘ್ನೇಶ್ವರನು ಸಂತೋಷಪಟ್ಟನು.

ಅವನು ಗಂಗೆಗೆ ನಮಸ್ಕಾರ ಮಾಡಿ, "ಅಮ್ಮಾ! ತನಯನನ್ನು ಕ್ಷಮಿಸು. ನಿನ್ನ ದಯಾಮೃತಜಲ ಶಾಖೆಗಳಿಂದ ವಿಂಧ್ಯಾದ್ರಿಯ ಆಚೆಗಿರುವ ಭೂಭಾಗವೆಲ್ಲಾ ಸುಭಿಕ್ಷವಾಗಬೇಕಂತಲೇ ಹೀಗೆ ಮಾಡಿದೆನು. ದಕ್ಷಿಣ ಗಂಗೆಯಾಗಿ ಗೌತಮನದ್ವಾರಾ ಅವತರಿಸಿದ ನೀನು ಗೋವನ್ನು ಬದುಕಿಸಿದವಳಾದುದರಿಂದ ಗೋದಾವರಿ ಎಂಬ ಹೆಸರಿನಿಂದ ಪ್ರಸಿದ್ಧಳಾಗುವಿ" ಎಂದು ನಮಸ್ಕಾರ ಮಾಡಿ ಅದೃಶ್ಯನಾದನು.

ಗೋದಾವರಿ ಅನೇಕ ಉಪನದಿಗಳೊಂದಿಗೆ ಪೂರ್ವ ಮುಖವಾಗಿ ಪ್ರವಹಿಸಿ, ವಿಸ್ತಾರವಾದ ಮೈದಾನ ಪ್ರದೇಶವನ್ನು ಸಸ್ಯಶ್ಯಾಮಳವಾಗುವಂತೆ ಮಾಡಿತು. ಸಪ್ತರ್ಷಿಗಳೂ, ದೇವತೆಗಳೂ ಗೋದಾವರಿಯಲ್ಲಿ ಜಳಕವಾಡಿದರು. ಗೌತಮನನ್ನು ಶ್ಲಾಘಿಸಿ ಅಪರ ಭಗೀರಥನೆಂದರು. ಗೋದಾವರಿ ಸಪ್ತ ಗೋದಾವರಿಯಾಗಿ ಸೀಳಿಕೊಂಡು ಪೂರ್ವ ಸಮುದ್ರವನ್ನು ಸೇರಿತು.

ಹಾಗೆ ಗಂಗಾದೇವಿ ಗೋದಾವರಿಯಾಗಿ ಮಾರ್ಪಡುವಾಗ ಅವಳ ಕರ್ರಗಿನ ವೇಣೀ ಸಮೂಹವು ವಿಸ್ತಾರವಾಗಿ ಹರಡಿಕೊಂಡು ಪಡುಗಡೆಯ ಕಣಿವೆಗಳಲ್ಲಿ ಸಿಕ್ಕಿಕೊಂಡಿತು. ಆಗ ವಿಷ್ಣು ತನ್ನ ಕೈಯ ಬೆರಳುಗಳಿಂದ ಆ ಕೂದಲಿನ



ಸಿಕ್ಕನ್ನು ಬಿಡಿಸಿದನು. ಕೃಷ್ಣವರ್ಣನಾದ ವಿಷ್ಣುವಿನ ಬೆರಳುಗಳ ಸಂದುಗಳಿಂದ ನೆನೆದ ಕೂದಲಿನ ರಾಶಿಯ ನೀರು ಜಾರುತ್ತಾ ಕೃಷ್ಣವೇಣಿಯೆನಿಸಿದ ಕೃಷ್ಣಾನದಿಯೆಂಬ ಇನ್ನೊಂದು ದೊಡ್ಡದಾದ ಜೀವನದಿ ಹರಿಯತೊಡಗಿತು.

ಹಾಗೆಯೇ ಗಂಗೆ ಉಕ್ಕಿದಾಗ ಗಂಗಾಜಲವು ಆಕಾಶಕ್ಕೆ ಹಾರಿ ದಕ್ಷಿಣದ ಬೆಟ್ಟಗಳಲ್ಲಿ ತಪಸ್ಸು ಮಾಡುತ್ತಿದ್ದ ಕವೇರಮುನಿಯ ಕಮಂಡಲುವಿನಲ್ಲಿ ಬಿದ್ದು, ಕನ್ಯೆಯಾಗಿ ಹುಟ್ಟಿ ಬೆಳೆದಳು. ಅವಳು ಅಗಸ್ತ್ಯನ ಹಿಂದೆ ಅರಣ್ಯಗಳಲ್ಲಿ ವಿಹರಿಸುತ್ತಾ ಕಾವೇರಿ ನದಿಯಾಗಿ ಮಾರ್ಪಟ್ಟು ಸುಂದರವಾದ ಜಲಪಾತಗಳಾಗಿ ಧುಮುಕಿ ನಲಿದು ಗಂಭೀರಳಾಗಿ ದಕ್ಷಿಣ ಸೀಮೆಯಲ್ಲಿ ಹರಿದು ಸುಭಿಕ್ಷಗೊಳಿಸಿದಳು.

ಈ ವಿಧವಾಗಿ ಗೌತಮ ಮಹರ್ಷಿ ತಂದ ಗಂಗೆ ಮತ್ತೆ ಮೂರು ದೊಡ್ಡ ನದಿಗಳಾಗಿ ದಕ್ಷಿಣ ಭಾರತ ಭೂಮಿಯನ್ನು ಕೂಡಾ ಉದ್ಧರಿಸಿದಳು.

ಗಂಗಾ, ಸಿಂಧು, ಗೋದಾವರೀ, ಕೃಷ್ಣಾ, ಕಾವೇರಿಗಳೆಂಬ ಮಹಾನದಿಗಳ ಹೆಸರು ಹೇಳಿಕೊಳ್ಳುವುದು ಭಾರತೀಯರಿಗೆ ಪರಿಪಾಠವಾಗಿ ಹೋಯಿತು.

ಅಂತೂ ಗೌತಮನ ಪಾಪ ಪರಿಹಾರವಾಗಿ ಅವನ ಆಶ್ರಮವು ಕಳೆಗೊಂಡಿತು. ಗೋದಾವರಿಯ ಉದ್ದಕ್ಕೂ ಪುಣ್ಯಕ್ಷೇತ್ರಗಳು ಬೆಳಗಿದುವು. ಗಂಗೆ ಪಶ್ಚಿಮ ಕಣಿವೆಗಳ ಕಡೆಗೆ ಪ್ರವಹಿಸುವುದು ಅಸಂಭವವಾದುದರಿಂದಲೇ ಇಂದ್ರನು ಆ ವಿಧವಾಗಿ ಪರಿಹಾರ ಹೇಳಿದ್ದನು. ಅಸಂಭವಾದುದನ್ನು ಸಾಧಿಸಿ ಸಂಭವವನ್ನಾಗಿ ಮಾರ್ಪಡಿಸಿದ ಗೌತಮನ ದೊಡ್ಡತನವನ್ನು ಗುರುತಿಸಿ ಅವನ ಬಳಿಗೆ ಬಂದು ವಂದಿಸಿ ಕ್ಷಮೆ ಕೇಳಿಕೊಂಡನು ಇಂದ್ರ.

ಆದರೆ ಗೌತಮನಿಗೆ ಮಾತ್ರ ಸಂತೋಷವಿರಲಿಲ್ಲ. ಈ ಮೊದಲೇ ಇಂದ್ರನಿಂದ ಮೋಸ ಹೋಗಿ, ಹೆಂಡತಿಯಾದ ಅಹಲ್ಯೆಯನ್ನು ಬಂಡೆ ಕಲ್ಲಾಗಿ ಬಿದ್ದಿರುವಂತೆ ಶಪಿಸಿ, ಉತ್ತರ ದೇಶದಿಂದ ವಿಂಧ್ಯಾದ್ರಿಯನ್ನು ದಾಟಿ, ಪಶ್ಚಿಮ ಕಣಿವೆಯ ಸಾನುಭೂಮಿಯಲ್ಲಿ ಆಶ್ರಮ ಕಟ್ಟಿಕೊಂಡು ಪ್ರಶಾಂತವಾಗಿ ತಪಸ್ಸು ಮಾಡಿಕೊಂಡಿದ್ದವನು ಗೌತಮ. ಗೋದಾವರಿಯ ಅವತರಣದಿಂದ ಪಶ್ಚಿಮ ಕಣಿವೆಯ ನಿವಾಸಿಗಳಾದ ಮುನಿಗಳ ಆಶ್ರಮಗಳು ಮತ್ತಷ್ಟು ಶೋಭಿಸಿದುವು. ಆ ಪ್ರಾಂತದಲ್ಲಿದ್ದ ಅತ್ರಿ ಮಹಾಮುನಿ ತ್ರಿಮೂರ್ತಿಗಳ ಅಂಶದಿಂದ ಪುತ್ರವಂತನಾದನು. ಅವನ ಪತ್ನಿ ಅತಿಥಿಗಳಿಗೆ ಸದಾ ಅನ್ನದಾನ ಮಾಡುತ್ತಿದ್ದಳು. ಬೆಳೆಗಳು ಪುಷ್ಕಲವಾಗಿ ಬರತೊಡಗಿದುವು.

ಹೀಗೆ ಗೌತಮನ ಆಶ್ರಮದ ಸುತ್ತುಮುತ್ತಲೂ ವಿಶೇಷವಾಗಿ ಸಸ್ಯಸಮೃದ್ಧಿ ಇದ್ದರೂ ಅಹಲ್ಯೆಯಿಲ್ಲದ ಕೊರತೆ ಕಾಣುತ್ತಲೇ ಇದ್ದಿತು. ತಾನು ದುಡುಕಿ ಅಹಲ್ಯೆಯನ್ನು ಶಪಿಸಿದೆನೆಂದು ಗೌತಮನು ಮನಸ್ಸಿನೊಳಗೇ ಪಶ್ಚಾತ್ತಾಪಪಡುತ್ತಿದ್ದನು. ಆಗ ವಿಘ್ನೇಶ್ವರನು ಅವನ ಮುಂದೆ ಹೋಗಿ, "ಗೌತಮಾ, ಇನ್ನು ಬೇಗದಲ್ಲೇ ವಿಷ್ಣು ರಾಮನಾಗಿ ಅವತರಿಸಿ ಬಂದು ನಿನ್ನ ಪತ್ನಿಯ ಪಾಪವನ್ನೇ ಹೋಗಲಾಡಿಸುತ್ತಾನೆ. ಪಾಷಾಣಿ ಪುನೀತಳಾಗುತ್ತಾಳೆ. ಗೋದಾವರಿಯ ಅವತರಣಕ್ಕಾಗಿ ನಿನಗೆ ತುಂಬಾ ಶ್ರಮಕೊಟ್ಟೆನು. ಇದರ ಸ್ಮಾರಕವಾಗಿ ಗೋದಾವರಿ ನದಿಗೆ ಗೌತಮೀ ನಾಮವು ಚಿರಸ್ಥಾಯಿಯಾಗಿರುತ್ತದೆ" ಎಂದನು.

ಗೌತಮನು ಆ ಮಾತಿಗೆ ಸಂತೋಷಪಟ್ಟು. "ಎಲ್ಲವೂ ನಿನ್ನ ಸಂಕಲ್ಪ ಬಲದಿಂದಲೇ ನಡೆಯಿತು. ಗೋದಾವರಿಯ ನೀರೂ ವಿಘ್ನೇಶ್ವರನ ಕೃಪೆಯೂ ಯಾವಾಗಲೂ ರಕ್ಷಿಸಿಕೊಂಡಿರುತ್ತವೆ" ಎಂದನು.





# ಗಂಧರ್ವೇಂದ್ರನ ಮಗಳು

ಹಿಂದೆ ಒಂದಾನೊಂದು ಕಾಲದಲ್ಲಿ ಬಸ್ರಾನಗರದಲ್ಲಿ ಹಸನ್ ಎಂಬ ಯುವಕನಿದ್ದನು. ಹಸನ್ ಎಂದರೆ ಸೌಂದರ್ಯವೆಂಬ ಅರ್ಥವಿರುವುದರಿಂದ, ಹೆಸರಿಗೆ ತಕ್ಕಂತೆ ಹಸನ್ ಒಬ್ಬ ಸುಂದರ ಯುವಕನೇ. ಆ ಕಾಲದಲ್ಲಿ ಬಸ್ರಾನಗರದಲ್ಲಿ ಹಸನ್ನನಂತಹ ಸೌಂದರ್ಯಶಾಲಿಯಾದವನು ಇನ್ನೊಬ್ಬನಿರಲಿಲ್ಲ. ಅವನ ತಾಯಿತಂದೆಯರಿಗೆ ಅವನೊಬ್ಬನೇ ಮಗನಾದುದರಿಂದ ಅವನನ್ನು ಸ್ವಲ್ಪ ಹೆಚ್ಚಿನ ಕೊಂಡಾಟದಲ್ಲೇ ಬೆಳಸಿದರೆನ್ನಬೇಕು. ತಂದೆಗೆ ಮಗನ ಬೆಳವಣಿಗೆಯನ್ನು ಕಾಣುವ ಭಾಗ್ಯವಿಲ್ಲದೆ, ಅವನ ಚಿಕ್ಕತನದಲ್ಲೇ ತೀರಿಹೋಗಿದ್ದನು. ಆಗ ತಂದೆ ಸಂಪಾದಿಸಿದ ಹಣ ಹೇರಳವಾಗಿದ್ದರೂ, ಹಸನ್ ಹಾಳು ಮಿತ್ರರೊಂದಿಗೆ ಸೇರಿ, ತಿರುಗಿ ತಿಂದು ಎಲ್ಲಾ ತೀರಿಸಿಬಿಟ್ಟನು.

ಆಮೇಲೆ ಅವನ ತಾಯಿ ತನ್ನ ಸ್ವಂತ ಹಣದಿಂದ ದೊಡ್ಡ ಪೇಟೆಯಲ್ಲಿ ಒಂದು ಆಭರಣ ತಯಾರಿಸುವ ಅಂಗಡಿಯನ್ನು ತೆರೆಯಿಸಿದಳು. ಹಸನ್ ದಿನಾ ಆ ಅಂಗಡಿಯಲ್ಲಿ ಕುಳಿತುಕೊಂಡು ಬಂಗಾರದ ನಗಗಳನ್ನು ಮಾಡುತ್ತಾ ಇರುವನು. ಅವನ ಅಂದಚಂದವಾದ ರೂಪವನ್ನು ದಾರಿಯಲ್ಲಿ ಹೋಗುವವರು ಕಣ್ಣಿಟ್ಟು ನೋಡುವರು. ಅವನ ಸೌಂದರ್ಯವು ಚಿಕ್ಕವರನ್ನೂ ದೊಡ್ಡವರನ್ನೂ ಆಕರ್ಷಿಸುವಂತಿತ್ತು.

ಒಂದುದಿನ ಹಸನ್ ತನ್ನ ಅಂಗಡಿಯಲ್ಲಿ ಕುಳಿತುಕೊಂಡು ಕೆಲಸಮಾಡುತ್ತಿದ್ದಾಗ, ಒಬ್ಬ ಪರ್ಷಿಯಾ ದೇಶದ ವೃದ್ಧನು ಬಿಳಿಯ ಮುಂಡಾಸನ್ನು ಧರಿಸಿಕೊಂಡು, ಉದ್ದವಾದ ಬಿಳಿಯ ಗಡ್ಡದೊಂದಿಗೆ ಆ ದಾರಿಯಾಗಿ ಬರುತ್ತ ಹಸನ್ನನ್ನು ನೋಡಿ ನಿಂತುಬಿಟ್ಟನು. ಅವನನ್ನು ನೋಡುವಾಗ, ಗೌರವಸ್ಥನಾದ ದೊಡ್ಡ ಮನುಷ್ಯನಂತೆ ಕಾಣುತ್ತಿದ್ದನು.

ಆಗ ಮಧ್ಯಾಹ್ನ ಪ್ರಾರ್ಥನೆಯ ವೇಳೆಯಾಯಿತು. ಬೀದಿಯಲ್ಲಿದ್ದವರೆಲ್ಲಾ ಪ್ರಾರ್ಥನೆಗೆ ಹೋದುದರಿಂದ ಬೀದಿ ಖಾಲಿಯಾಯಿತು. ಪರ್ಷಿಯನ್ ಮುದುಕನು ಹಸನ್ನನ ಅಂಗಡಿಗೆ ಪ್ರವೇಶಿಸಿ ಸಲಾಂ ಮಾಡಿದನು. ಹಸನ್ ಅವನಿಗೆ ಪ್ರತಿ ಸಲಾಂ ಸಲಿಸಿ ಕುಳಿತುಕೊಳ್ಳುವಂತೆ ಮರ್ಯಾದೆ ಮಾಡಿದನು.

ವೃದ್ಧನು ಕುಳಿತುಕೊಂಡು ಕಿರುನಗೆಯೊಂದಿಗೆ, "ಅಪ್ಪಾ, ನನಗೆ ಮಕ್ಕಳು ಮರಿಗಳು ಏನೂ ಇಲ್ಲ,



ನನಗೊಂದು ಪ್ರತ್ಯೇಕ ವಿದ್ಯೆ ಗೊತ್ತಿದೆ. ನಿನ್ನನ್ನು ನೋಡಿದ ಕೂಡಲೇ ಆ ವಿದ್ಯೆಯನ್ನು ನಿನಗೆ ಕಲಿಸಬೇಕೆಂದು ಆಸೆಯಾಗಿದೆ. ನನ್ನ ಅನಂತರ ನೀನು ಆ ವಿದ್ಯೆಯನ್ನು ಅಭ್ಯಾಸಮಾಡಿ ಮುಂದುವರಿಸಬಹುದು. ಹೀಗೆ ಕುಳಿತು ಕಷ್ಟಪಟ್ಟು ಆಭರಣಗಳನ್ನು ಮಾಡಿಕೊಂಡು ನಿನ್ನ ಅಂದಚೆಂದ ಆರೋಗ್ಯಗಳನ್ನು ಕೆಡಿಸಿಕೊಳ್ಳಬೇಕಾಗಿಲ್ಲ. ನನ್ನ ವಿದ್ಯೆ ಎಷ್ಟೊಂದು ಅಪರೂಪದ್ದೆಂದರೆ ಅದನ್ನು ಸಂಪಾದಿಸಲು ಎಷ್ಟು ಸಾವಿರಮಂದಿ ಬೇಕಾದರೂ ಪ್ರಾಣ ಸಮರ್ಪಣೆ ಮಾಡಿಯಾರು. ನಿನ್ನನ್ನು ಈ ಅಂಗಡಿಯಲ್ಲಿ ನೋಡುವವರೆಗೂ ನನಗೆ ಈ ವಿದ್ಯೆಯನ್ನು ಇನ್ನೊಬ್ಬರಿಗೆ ಕಲಿಸಿಕೊಡಬೇಕೆಂಬ ಆಲೋಚನೆಯೇ ಬರಲಿಲ್ಲ" ಎಂದನು.

ಅದನ್ನು ಕೇಳಿ ಹಸನ್ ಕುತೂಹಲದಿಂದ, "ಹಾಗಾದರೆ ನನ್ನನ್ನು ನೀವೇ ಪೋಷಿಸಿ ನಿಮ್ಮ ವಿದ್ಯೆಯನ್ನು ಕಲಿಸಿಕೊಡುವಿರೆಂದಾಯಿತು. ಯಾವಾಗ ಕಲಿಸುವಿರಿ?" ಎಂದು ಆತುರದಿಂದ ಕೇಳಿದರು. "ನಾಳೆಯೇ! ಇಲ್ಲಿಗೆ ಬರುತ್ತೇನೆ" ಎಂದು ಹೇಳಿ ಆ ಪರ್ಷಿಯನ್ನನು ಅಲ್ಲಿಂದ ಹೊರಟುಹೋದನು.

ಅತ್ಯಾನಂದದಿಂದ ಕೂಡಿದ ಉತ್ಸಾಹದಲ್ಲಿ ಹಸನ್ ಅಂಗಡಿಯನ್ನು ಮುಚ್ಚಿ, ತಾಯಿಯ ಬಳಿಗೆ ಓಡುತ್ತಾ ಹೋಗಿ, ಈ ಹೊಸ ಸಮಾಚಾರವನ್ನು ಅವಳೊಂದಿಗೆ ಹೇಳಿದನು. ಅದನ್ನು ಕೇಳಿ ಅವಳು ಉತ್ಸಾಹವೇನಿಲ್ಲದೆ, "ಅಪ್ಪಾ, ಪರ್ಷಿಯನ್ ನಾಸ್ತಿಕರ ಮಾತನ್ನು ನಂಬಬಹುದೇ ? ಅವರು ಅಗ್ನಿಯನ್ನು ಆರಾಧಿಸುವವರು. ಅವರಿಗೆ ಗೊತ್ತಿರುವ ವಿದ್ಯೆ ಬಂಗಾರವನ್ನು ಮಾಡುವುದೇ. ಆದರೆ ಅವರ ಸ್ನೇಹ ಮಾಡಿದವರಾರಿಗೂ ಒಳ್ಳೆಯದಾಗುವುದಿಲ್ಲ. ನಾಶವಾಗಿ ಹೋಗುತ್ತಾರಪ್ಪಾ" ಎಂದಳು,

ಹಸನ್ ನಿರ್ಲಕ್ಷ್ಯವಾಗಿ ನಕ್ಕು, "ಅಮ್ಮಾ, ನಾವಂತೂ ಬಡವರು. ನಮ್ಮಿಂದ ಯಾರೂ ಏನನ್ನೂ ದೋಚಿಕೊಳ್ಳುವಂತಿಲ್ಲ. ಆ ಮುದುಕ ತುಂಬಾ ಯೋಗ್ಯನಂತೆ ಕಾಣುತ್ತಾನೆ. ಅತನ ದಯೆ ನಮ್ಮ ಮೇಲೆ ಬೀಳುವುದರಿಂದ ನಮಗೆ ಲಾಭವೇ ಉಂಟಾಗುವಾಗ ಏಕೆ ಬೇಡೆನ್ನಲಿ. ಇಲ್ಲದ ಸಂದೇಹವು ಬೇಡವಮ್ಮಾ" ಎಂದನು.

ಏನೂ ಹೇಳದೆ ತಾಯಿ ಸುಮ್ಮನಾದಳು. ಆತುರದಲ್ಲಿ ತವಕಿಸಿಕೊಂಡಿದ್ದ ಹಸನ್ನನಿಗೆ ರಾತ್ರಿ ಸರಿಯಾಗಿ ನಿದ್ದೆ ಕೂಡಾ ಬರಲಿಲ್ಲ. ಮರುದಿನ ಬೆಳಗಾದ ಕೂಡಲೇ ಅವನು ಎದ್ದು ತನ್ನ ಅಂಗಡಿಗೆ ಹೋದನು. ಸ್ವಲ್ಪ ಹೊತ್ತಿನಲ್ಲಿ ಅದೇ ಪರ್ಷಿಯನ್ ವೃದ್ಧನು ಅಲ್ಲಿಗೆ ಬಂದನು. ಅವನು ಹಸನ್ನನ್ನು ಆಲಿಂಗಿಸಿಕೊಂಡು, "ನಿನ್ನೆ ಕೇಳಲು ಮರೆತೆ. ನಿನಗೆ ಮದುವೆ ಆಗಿದೆಯೇನಪ್ಪಾ ?" ಎಂದು ಕೇಳಿದನು.

"ಇನ್ನೂ ಆಗಿಲ್ಲ. ಅಮ್ಮ ನನ್ನನ್ನು ಮದುವೆ ಮಾಡಿಕೊಳ್ಳಲು ಒತ್ತಾಯಿಸಿಕೊಂಡಿದ್ದಾಳೆ. ನಾನಿನ್ನೂ ಸಿದ್ಧನಾಗಿಲ್ಲ". ಎಂದನು ಹಸನ್.

"ಭೇಷ್! ಒಳ್ಳೇದಾಯಿತು. ನನ್ನ ವಿದ್ಯೆ ಬ್ರಹ್ಮಚಾರಿಗಳಿಗೆ ಮಾತ್ರವೇ ಹೇಳುವಂಥಾದ್ದು" ಎಂದು ವೃದ್ಧನು "ಹಳೆಯ ತಾಮ್ರವೇನಾದರೂ ನಿನ್ನ ಹತ್ತಿರವಿದೆಯೆ?" ಎಂದು ಕೇಳಿದನು.

ಹಸನ್ ಒಡೆದು ಹೋದ ಒಂದು ತಾಮ್ರದ ಹರಿವಾಣವನ್ನು ತಂದು ತೋರಿಸಿದನು.

"ಇದೇ ಬೇಕಾದ್ದು. ಈ ತಾಮ್ರದ ಹರಿವಾಣವನ್ನು ತುಂಡು ತುಂಡು ಮಾಡಿ, ಆ ತುಂಡುಗಳನ್ನೆಲ್ಲ ಮೂಸೆಯಲ್ಲಿಟ್ಟು ಕುಲಿಮೆಯ ಬೆಂಕಿಯನ್ನು ತಿದಿ ಹಾಕಿ ಕರಗಿಸು ನೋಡುವಾ" ಎಂದನು ಪರ್ಷಿಯನ್ ವೃದ್ಧ.

ಬೇಗ ಬೇಗನೇ ಹಸನ್ ಆ ಹಳೆಯ ತಾಮ್ರವನ್ನು ಅವನು ಹೇಳಿದಂತೆಯೇ ಕರಗಿಸಿದನು. ವೃದ್ಧನು ಹತ್ತಿರ ಬಂದು ತನ್ನ ಮುಂಡಾಸಿನ ಮಡಿಕೆಯಿಂದ ಒಂದು ಪೊಟ್ಟಣವನ್ನು ತೆಗೆದು, "ಹಕ್‌ಹಂ, ಮಕ್‌ಹಂ, ಬಕ್‌ಹಂ..." ಎಂದು ಮಂತ್ರೋಚ್ಚಾರ ಮಾಡುತ್ತ, ಆ ಪೊಟ್ಟಣದೊಳಗಿನಿಂದ ಕುಂಕುಮ ಹೂರಂಗಿನ ಪುಡಿ ಒಂದು ಚಿಟಿಕೆಯಷ್ಟು ತೆಗೆದು ಮೂಸೆಯೊಳಗೆ ಹಾಕಿದನು.

ಕೂಡಲೇ ಮೂಸೆಯೊಳಗಿನ ತಾಮ್ರದ ನೀರು ಗಡ್ಡೆ ಕಟ್ಟುತ್ತಾ ಬಂಗಾರದ ಗಟ್ಟಿಯಾಗಿ ಮಾರ್ಪಟ್ಟಿತು.

ಹಸನ್ ಇದನ್ನು ನೋಡಿ ಬೆರಗಾದನು. ವೃದ್ಧನು ಹೇಳಿದಂತೆ ಅವನು ಆ ಬಂಗಾರದ ತುಂಡನ್ನು ಒರೆಗಲ್ಲಿನ ಮೇಲೆ ಗೀಚಿ, ಅದು ಅಪ್ಪಟ ಬಂಗಾರವೆಂಬುದನ್ನು ರುಜು ಪಡಿಸಿಕೊಂಡನು. ನಗಗಳ ವರ್ತಕರು ಆ ಬಂಗಾರಕ್ಕೆ ಒಳ್ಳೆಯ ಬೆಲೆ ಕೊಡುವರೆಂಬುದಕ್ಕೆ ಸಂದೇಹವೇನಿಲ್ಲ.

ವೃದ್ಧನು ಹಸನ್ನನ್ನು ನೋಡಿ, "ಇದನ್ನು ಇಂದೇ ಪೇಟೆಗೆ ಒಯ್ದು ಮಾರಿ ಹಣ ತಂದುಕೋ. ಇದು ಹೇಗೆ ಬಂತೆಂಬ ರಹಸ್ಯ ಮಾತ್ರ ಯಾರಿಗೂ ಹೇಳಬೇಡ. ಹಾಗೇನಾದರೂ ಪ್ರಶ್ನೆ ಬಂದರೆ ಮನೆಯಲ್ಲಿದ್ದ ಹಿರಿಯರ ಹಳೆಯ ಸೊತ್ತು ಅಂದುಬಿಡು" ಎಂದನು.





ಹಸನ್ ಅದನ್ನು ಒಯ್ದು ಮಾರಿದಾಗ ಎರಡು ಸಾವಿರ ದೀನಾರಗಳು ದೊರೆತುವು. ಆ ಹಣವನ್ನು ಮನೆಗೆ ಒಯ್ದು ತಾಯಿಗೆ ತೋರಿಸಿ ಇದೆಲ್ಲವೂ ಆ ಪರ್ಷಿಯನ್ ವೃದ್ಧನ ದಯದಿಂದಲೇ ಸಾಧ್ಯವಾಯಿತು ಎಂದು ಹೇಳಿದನು. ಅವನು ಹಾಗೇ ಹೇಳಿದುದರಿಂದ ಆ ತಾಯಿಯ ಅನುಮಾನಗಳೇನೂ ಹೋಗಿ ಬಿಡಲಿಲ್ಲ. ಆದರೂ ಹಸನ್ ಅವಳ ಅನುಮಾನಗಳನ್ನು ಲಕ್ಷ್ಯಮಾಡದೆ, ತನ್ನ ಮನೆಯಲ್ಲಿದ್ದ ಹಿತ್ತಾಳೆಯ ಒಡಕು ಬಿಂದಿಗೆಯನ್ನು ಜಜ್ಜಿ ಮುದ್ದೆ ಮಾಡಿ ತನ್ನ ಅಂಗಡಿಗೆ ತೆಗೆದುಕೊಂಡು ಹೋದನು.

ವೃದ್ಧನು ಇನ್ನೂ ಅವನ ಅಂಗಡಿಯಲ್ಲೇ ಕುಳಿತಿದ್ದನು. ಹಸನ್ ಹಿತ್ತಾಳೆಯ ದೊಡ್ಡ ಮುದ್ದೆಯನ್ನು ಒಂದು ಬದಿಯಲ್ಲಿಟ್ಟು, ಕುಲುಮೆಗೆ ತಿದಿಯೊತ್ತಿ ಉರಿ ಎಬ್ಬಿಸುವುದನ್ನು ನೋಡಿ ವೃದ್ಧನು, "ಏನು ಮಾಡುತ್ತಿ ?" ಎಂದು ಕೇಳಿದನು.

"ಇದನ್ನು ಕೂಡಾ ಬಂಗಾರವಾಗಿ ಮಾರ್ಪಡಿಸಿ ಬಿಡೋಣ" ಎಂದನು ಹಸನ್.

ವೃದ್ಧನು ನಗುತ್ತ, "ಕಂದಾ, ಒಂದೇ ದಿನದಲ್ಲಿ ನಿನ್ನ ಹತ್ತಿರ ಇಷ್ಟೊಂದು ಬಂಗಾರ ಎಲ್ಲಿಂದ ಬಂತೆಂದು ಕೇಳಿದವರಿಗೆ ಏನು ಹೇಳುತ್ತೀ ? ನಿನ್ನ ರಹಸ್ಯ ಹೇಗೆ ಅಡಗಿರುತ್ತದೆ ?" ಎಂದನು.

"ಅದು ನಿಜವೇ ಆದರೂ, ನಿಮ್ಮ ವಿದ್ಯೆಯನ್ನು ಆದಷ್ಟು ಬೇಗ ಕಲಿತುಕೊಳ್ಳಬೇಕೆಂಬ ಆತುರವಷ್ಟೇ. ಮತ್ತೇನೂ ಇಲ್ಲ" ಎಂದನು ಹಸನ್.

ವೃದ್ಧನು ಗಟ್ಟಿಯಾಗಿ ನಗುತ್ತ, "ಇದು ನಡು ಬಜಾರಿನಲ್ಲಿ ಕಲಿತುಕೊಳ್ಳುವ ವಿದ್ಯೆ ಅಂದುಕೊಂಡೆಯಾ ? ನಿಜಕ್ಕೂ ನಿನಗೆ ಈ ವಿದ್ಯೆಯನ್ನು ಕಲಿತುಕೊಳ್ಳಬೇಕೆಂದಿದ್ದರೆ ಕೆಲಸದ ಉಪಕರಣಗಳೊಂದಿಗೆ ನನ್ನ ಮನೆಗೆ ಬಾ" ಎಂದನು.

"ಸರಿ ನಡೆಯಿರಿ" ಎಂದು ಹಸನ್ ವೃದ್ಧನೊಂದಿಗೆ ಹೊರಟನು. ಆದರೆ ಬೀದಿಯಲ್ಲಿ ನಡೆಯುವಾಗ, ಪರ್ಷಿಯನ್ನನು ನಾಸ್ತಿಕನೆಂದು ಮುಂತಾಗಿ ತಾಯಿ ಎಚ್ಚರಿಸಿದ ಮಾತು ನೆನಪಿಗೆ ಬಂದಿತು. ನಡೆಯುತ್ತಿದ್ದವನು ತಟಕ್ಕನೆ ನಿಂತು ತೀವ್ರವಾದ ಆಲೋಚನೆಗೆ ಬಿದ್ದನು.

ವೃದ್ಧನು ಅವನ ಆಲೋಚನೆಯನ್ನು ಊಹಿಸಿಕೊಂಡು, "ಕಂದಾ, ನಿನ್ನನ್ನು ಯಾವುದೋ ಸಂಕೋಚವು ಹಿಡಿದು ಪೀಡಿಸುವಹಾಗಿದೆ. ಈ ಪರುಷವೇದಿ ವಿದ್ಯೆಯನ್ನು ನನ್ನ ಮನೆಯಲ್ಲಿ ಕಲಿತುಕೊಳ್ಳಲು ನಿನಗೇನಾದರೂ ಅಭ್ಯಂತರವಿದ್ದರೆ ನಿನ್ನ ಮನೆಗೇ ಬಂದು ಕಲಿಸಿಕೊಡುತ್ತೇನೆ." ಎಂದು ವೃದ್ಧನು ಹೇಳಿದನು.

ಹಾಗೆ ಮಾಡಿದರೆ ತನ್ನ ತಾಯಿ ಭಯಪಡುವುದಕ್ಕೆ ಎಡೆಯಿಲ್ಲವೆಂದು ಹಸನ್ನನಿಗೆ ತೋರಿತು. ವೃದ್ಧನೊಂದಿಗೆ ಹಾಗೇ ಮಾಡಲು ಹೇಳಿದನು. ಅಲ್ಲಿಂದ ಇಬ್ಬರೂ ಕೂಡಿ ಹಸನ್ನನ ಮನೆಗೆ ಹೋದರು.

ಹಸನ್ ವೃದ್ಧನನ್ನು ಹೊರಚಾವಡಿಯಲ್ಲಿ ಕೂಡಲು ಹೇಳಿ, ಒಳಗೆ ಹೋಗಿ ತಾಯಿಯೊಂದಿಗೆ, "ಅಮ್ಮಾ, ಅವರು ನಮ್ಮ ಮನೆಗೇ ಅತಿಥಿಯಾಗಿ ಬಂದರು. ಇನು ಸಂದೇಹವೇ ಬೇಡ. ಒಂದುಸಾರಿ ನಮ್ಮ ಉಪ್ಪುತಿಂದ ಮೇಲೆ ನಮಗೆ ಯಾವ ದ್ರೋಹವನ್ನೂ ಮಾಡಲಾರರು " ಎಂದನು.

"ಅಪ್ಪಾ, ಅಂತಹ ನಂಬುಗೆಗಳು ನಮಗೇ ಹೊರತು ಅಗ್ನಿಯನ್ನು ಪೂಜಿಸುವ ನಾಸ್ತಿಕರಿಗೆ ಇರುವುದಿಲ್ಲ. ನಿನ್ನ ಕ್ಷೇಮವನ್ನು ಕುರಿತು ನನ್ನ ಆಂದೋಳನ ಹೋಯಿತೆಂದು ತಿಳಿಯಬೇಡಪ್ಪ. ನೀನು ಅತಿಥಿಯನ್ನು ಕರೆತಂದುಬಿಟ್ಟಿರುವುದರಿಂದ ನಾನು ಅಡಿಗೆಯನ್ನೆಲ್ಲಾ ಮಾಡಿಡುತ್ತೇನೆ. ಆ ಮನುಷ್ಯ ಒಳಗೆ ಬಂದರೆ ನಾನು ಈ ಮಾಡಿನ ಕೆಳಗೆ ಕೂಡಾ ಇರಲಾರೆ. ನೆರೆಮನೆಗೆ ಹೋಗಿ, ಆ ಮನುಷ್ಯ ಹೋದ ಮೇಲೆಯೇ ಬರುತ್ತೇನೆ." ಎಂದಳು ಹಸನ್ನನ ತಾಯಿ.

ಹೇಳಿದ ಹಾಗೆಯೇ ಅವಳು ಬಗೆಬಗೆಯ ಪದಾರ್ಥಗಳ ಅಡಿಗೆಯನ್ನು ಮಾಡಿ, ಬಡಿಸಿಕೊಳ್ಳಲು ಸಿದ್ಧವಾಗಿಟ್ಟು ನೆರೆಮನೆಗೆ ಹೋಗಿಬಿಟ್ಟಳು.

ಆಮೇಲೆ ಹಸನ್ ಪರ್ಷಿಯನ್ ವೃದ್ಧನನ್ನು ಒಳಗೆ ಕರೆದುಕೊಂಡು ಹೋಗಿ ಭೋಜನಕ್ಕೆ ಕುಳ್ಳಿರಿಸಿ, "ನಮ್ಮ ಮನೆಯಲ್ಲಿ ನೀವು ಊಟ ಮಾಡಿಬಿಟ್ಟರೆ,ನಮ್ಮೊಳಗೆ ಕಡಿಯಲಾಗದಂತೆ ಒಳ್ಳೆಯದಾದ ಆತ್ಮೀಯ ಬಂಧನವೇರ್ಪಡುತ್ತದೆ " ಎಂದನು.

" ಹೌದು. ಅದು ತುಂಬಾ ಪವಿತ್ರವಾದ ಬಂಧನವಪ್ಪಾ. ನಿನ್ನ ಮೇಲೆ ತುಂಬಾ ಪ್ರೇಮವಿಲ್ಲದಿದ್ದರೆ ಈ ಅಪೂರ್ವ ವಿದ್ಯೆಯನ್ನು ನಿನಗೆ ಕಲಿಸುವೆನೇ? " ಎಂದು ವೃದ್ಧನು ತನ್ನ ಮುಂಡಾಸಿನೊಳಗಿನಿಂದ ಒಂದು ಪೊಟ್ಟಣವನ್ನು ತೆಗೆದು, "ನೋಡು, ಇದರಲ್ಲಿರುವ ಪುಡಿಯಿಂದ ಎಷ್ಟೋ ಮಣ ಬಂಗಾರ ಮಾಡಬಹುದು. ಇದರಲ್ಲಿ ಸಾವಿರ ಮೂಲಿಕೆಗಳೂ, ಸಾವಿರ ಬೇರೆ ಬೇರೆ ಜೀನಸುಗಳೂ ಸೇರಿವೆ. ಬಹಳ ಶ್ರಮಪಟ್ಟು ಇದನ್ನು ತಯಾರಿಸಿದ್ದೇನೆ. ಆ ಪದ್ಧತಿಯನ್ನೆಲ್ಲಾ ನಿನಗೆ ನಾನು ಹೇಳುತ್ತೇನೆ" ಎಂದು. ಆ ಪೊಟ್ಟಣವನ್ನು ಹಸನ್ನನಿಗೆ ಕೊಟ್ಟನು.

ಹಸನ್ ಆ ಚೂರ್ಣವನ್ನು ಆಶ್ಚರ್ಯದಿಂದ ನೋಡುತ್ತಾ ಇದ್ದ ಸಮಯದಲ್ಲಿ, ವೃದ್ಧನು ಹಸನ್ನನ ತಟ್ಟೆಗೆ ಸ್ವಲ್ಪ ಊಟದ ಪದಾರ್ಥಗಳನ್ನು ಬಡಿಸಿ, ಅದರಲ್ಲಿ ಯಾವುದೋ ಮತ್ತು ಮದ್ದನ್ನು ಕೂಡಿಸಿಟ್ಟನು. "ಇನ್ನು ಊಟಮಾಡೋಣ ಅಪ್ಪಾ!" ಎಂದನು ವೃದ್ಧ.

ಹಸನ್ ತಟ್ಟೆಯಲ್ಲಿದ್ದುದನ್ನು ಕಲಸಿ ಒಂದು ತುತ್ತನ್ನು ಬಾಯಿಗಿಟ್ಟು, ಮರುಕ್ಷಣದಲ್ಲಿ ಬೋದ ತಪ್ಪಿ ಬಿದ್ದುಬಿಟ್ಟನು. (ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೨ ಜನವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Ravindra S. Kamboj



M Natarajan

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ನವಂಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯ್ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

### ಸೆಪ್ಟೆಂಬರ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಎಲ್ಲಿದ್ದೇನೆ ಹೇಳ್ತೀರ?

ಎರಡನೇ ಫೋಟೋ: ಶ್ಯ್! ಹೇಳ್ಬೇಡಿ, ಸಿಕ್ಕಿಬೀಳ್ತೇನೆ!

ಕಳುಹಿಸಿದವರು: ಕೆ. ಎಲ್. ರಮಾನಂದ,

೬೫೦-೩, ನವಲೇಬಿಲ್ಡಿಂಗ್, ದಾವಣಗೆರೆ-೨

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




**ಇದೋ!**
**ಪೆಪ್ಪರ್‌ಮಿಂಟ್ ರುಚಿ ಸೇರಿದ**
**ಒಂದು ಚಾಕೋಲೇಟ್ ಬಿಸ್ಕೆಟ್**

# ಸ್ಕ್ರನ್‌ಚ್

## ಕರಕರನೆ ತಿನ್ನಲು ಒಳ್ಳೆಯ ತಿಂಡಿ

ಇಂಡಿಯಾದಲ್ಲಿ, ಇದೇ ತರಹ ಎರಡು ರುಚಿಗಳು ಸಂಯುಕ್ತಗೊಂಡಿರುವ, ಮಧುರವಾದ ತಿಂಡಿ ಎಂದರೆ, ಇದೇ ಮೊದಲನೆಯದು. ಚಾಕೋಲೇಟ್ ಮತ್ತು ಅದರಲ್ಲಿ ಸೇರಿದ ಮಿಂಟ್. ಮೃದುವಾದ, ರುಚಿಕರವಾದ, ಮಿಂಟ್‌ಸೇರಿದ, ಸಮೃದ್ಧಿತ ಚಾಕೋಲೇಟ್‌ಕ್ರೀಮ್— ಇದನ್ನು ಗರಿಗರಿಯಾಗಿರುವಂತೆ ಬೇಯಿಸಿದ, ಸುಂದರವಾದ ಹೊಂಬಣ್ಣದ ಎರಡು, ಬಿಸ್ಕೆಟ್‌ಗಳ ನಡುವೆ ಇಟ್ಟರೆ, ಆಹಾ! ಎಂತಹ ರುಚಿ! ನೀವು ಹಿಂದೆಂದೂ ಸವಿಯದೆ ಇರುವಂತಹ ರುಚಿ...ಇಂದೇ ಒಂದು ಪ್ಯಾಕೆಟ್ ಬಿಸ್ಕೆಟ್ ಕೊಳ್ಳಿರಿ. ಕರಕರನೆ ತಿನ್ನಿರಿ...ಸ್ಕ್ರನ್‌ಚ್... ಸ್ಕ್ರನ್‌ಚ್... ಸ್ಕ್ರನ್‌ಚ್...



**ಸ್ಕ್ರನ್‌ಚ್ ಕರಕರನೆ ತಿನ್ನಲು ಒಳ್ಳೆಯ ತಿಂಡಿ**

ಟ್ರೂ ಬಿಸ್ಕಟ್‌ಗಳ ತಯಾರಕರು ಪ್ರಸ್ತುತಗೊಳಿಸಿರುವ ಹೊಸ ತಿಂಡಿ.

HTM-AFL-2345

# ಹೊಳಪಿಗೆ, ಬಿಳುಪಿಗೆ

# ಕಸ್ತೂರಿ

"ಕಸ್ತೂರಿ ನೀಲಂ ಸೋಪು"–ಒಗೆತಕ್ಕೆ
ಕೊಡುವುದು ಬೆಳುಪಿನ ಮಿರುಗು.
"ಕಸ್ತೂರಿ ಬಾರ್ ಸೋಪು"–ಒಗೆತಕ್ಕೆ
ಕೊಡುವುದು ಹೊಳಪಿನ ಬೆರಗು.
ಕೊಳೆಯನ್ನು ಕಳೆಯುವ ಕಸ್ತೂರಿಗೆ
ಸರಿಸಾಟಿಯೇ ಇಲ್ಲ.







AMC/SROM/18-81

ತಯಾರಕರು:—ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್, ಮಂಗಳೂರು-3.

ನನ್ನ ಜನ್ಮದಿನಕ್ಕೊಂದು
ಹೊಸ ಪುಸ್ತಕ

ಆದೊಂದು
**ಯೂಕೊಬ್ಯಾಂಕ್**
ಪಾಸ್ ಬುಕ್



ಹಲವಾರು ಉಪಹಾರಗಳನ್ನು ತರಬಲ್ಲ
ಒಂದು ಉಪಹಾರ. ಅದು ಯಾವುದು
ಗೊತ್ತೇ? ನನ್ನ ಯೂಕೊಬ್ಯಾಂಕ್
ಪಾಸ್ ಬುಕ್

ಅಮ್ಮಾ, ನಿನ್ನ ಈ ಸುವಿಚಾರಕ್ಕಾಗಿ
'ಧನ್ಯವಾದಗಳು'. ನನ್ನ ಅಲ್ಪ
ಉಳಿತಾಯವನ್ನು ಬಹುಗುಣ
ವಾಗಿಸಿದ್ದಕ್ಕೆ ಯೂಕೊಬ್ಯಾಂಕ್,
''ನಿನಗೂ ಧನ್ಯವಾದಗಳು.''

UCO/CAS-69/80 KAN




**ಯುನ್ಯಾಟೆಡ್ ಕಮರ್ಶಿಯಲ್ ಬ್ಯಾಂಕ್**
ಅಕ್ಕಪಕ್ಕದಲ್ಲಿರುವ ಸೌಕರ್ಯ ನೀಡುವ ಬ್ಯಾಂಕ್